

ಅಧ್ಯಯನನಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ-583276,

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಅರ್ಪಿಸುವ ನಿಬಂಧ

# ಕಿ.ರಂ. ಅವರ ಎರಡು ನಾಟಕಗಳು : ಒಂದು ಅಧ್ಯಯನ

ಸಂಶೋಧನಾ ವಿದ್ಯಾರ್ಥಿ
ತಳವಾರ ವಾಸುದೇವ
ನೋಂದಣಿ ಸಂಖ್ಯೆ : KVMBKS-00679

ಮಾರ್ಗದರ್ಶಕರು
ಡಾ. ಬಿ.ಆರ್.ನರಸಿಂಹಮೂರ್ತಿ
ಕನ್ನಡ ಸಹ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು
ಚಿಕ್ಕಬಳ್ಳಾಪುರ





ಕಾವ್ಯ ಮಂಡಲ
ಬೆಂಗಳೂರು

2013-14

1137

## ವಿದ್ಯಾರ್ಥಿ ಪ್ರಮಾಣ ಪತ್ರ

**ಕಿ.ರಂ. ಅವರ ಎರಡು ನಾಟಕಗಳು : ಒಂದು ಅಧ್ಯಾಯನ** ಎಂಬ ನಿಬಂಧವನ್ನು **ಡಾ. ಬಿ.ಆರ್.ನರಸಿಂಹಮೂರ್ತಿ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಎಂ.ಫಿಲ್ ಪದವಿಗಾಗಿ ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯಕ್ಕೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣಿಕರಿಸುತ್ತೇನೆ.

**ಸ್ಥಳ: ಬೆಂಗಳೂರು** **ಸಂಶೋಧನಾ ವಿದ್ಯಾರ್ಥಿ ಸಹಿ**

**ದಿನಾಂಕ:**

1137

# ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀಯುತ ತಳವಾರ ವಾಮದೇವ ಸಂಶೋಧಕರಾದ ಇವರು **ಕಿ.ರಂ. ಅವರ ಎರಡು ನಾಟಕಗಳು : ಒಂದು ಅಧ್ಯಯನ** ಈ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಎಂ.ಫಿಲ್ ಪದವಿಗಾಗಿ ಸಿದ್ಧಪಡಿಸಿ ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದಾರೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಡಪಡಿಸುತ್ತೇನೆ.

ಡಾ|| ಬಿ. ಆರ್. ನರಸಿಂಹ ಮೂರ್ತಿ
ಎಂ.ಎ., ಎಂ.ಇಡಿ., ಪಿ.ಎಚ್.ಡಿ.,
ಸಹ ಪ್ರಾಧ್ಯಾಪಕರು ಹಾಗೂ ಕನ್ನಡ ವಿಭಾಗದ ಮುಖ್ಯಸ್ಥರು
ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು
ಚಿಕ್ಕಬಳ್ಳಾಪುರ.

ಸ್ಥಳ: ಬೆಂಗಳೂರು
ದಿನಾಂಕ:

ಮಾರ್ಗದರ್ಶಕರು
ಡಾ. ಬಿ.ಆರ್.ನರಸಿಂಹಮೂರ್ತಿ
ಕನ್ನಡ ಸಹ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು
ಚಿಕ್ಕಬಳ್ಳಾಪುರ

# ಪರಿವಿಡಿ

## "ಕಿ.ರಂ ಅವರ ಎರಡು ನಾಟಕಗಳು: ಒಂದು ಅಧ್ಯಯನ"

# ಅಧ್ಯಾಯ-೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ :

ಕಿ.ರಂ. ನಾಗರಾಜ ಅವರ ಸೃಜನಶೀಲ ಸಾಹಿತ್ಯದ ಅಧ್ಯಯನ ಇಲ್ಲಿನ ಪ್ರಮುಖ ಉದ್ದೇಶವಾಗಿದೆ. ಕನ್ನಡ ಶ್ರೇಷ್ಠ ಚಿಂತಕರಲ್ಲಿ ಒಬ್ಬರೆನಿಸಿದ್ದ ಪ್ರೊ. ಕಿ.ರಂ.ನಾಗರಾಜ ಅವರು ಸಾವಿರ ವರ್ಷಗಳ ಇತಿಹಾಸವಿರುವ ಕನ್ನಡ ಸಾಹಿತ್ಯ ಪರಂಪರೆಗೆ ತಮ್ಮ ಸೂಕ್ಷ್ಮ ಒಳನೋಟಗಳ ಮುಖೇನ ಅನುಸಂಧಾನ ನಡೆಸಿ, ಪ್ರಖರ ತಾತ್ವಿಕ ನಿಲುವುಗಳ ಸಂವೇದನೆಯನ್ನು ನಿರೂಪಿಸಿದವರು. ಸಾಹಿತ್ಯ ಸಂಸ್ಕೃತಿ, ಭಾಷೆ, ಸಮಾಜ, ರಾಜಕೀಯಗಳ ಬಗ್ಗೆ ಅಧಿಕೃತವಾಗಿ ಮಾತನಾಡಬಲ್ಲ ಅನನ್ಯ ಬುದ್ದಿಜೀವಿಯಾಗಿದ್ದವರು, ತಮ್ಮ ಉಪನ್ಯಾಸಗಳ ಮೂಲಕ ನಾಡಿನಾದ್ಯಂತ ಹೊಸ ಅರಿವನ್ನು ಬಿತ್ತಿದವರು, ನಡೆದಾಡುವ ಗ್ರಂಥವೆಂದೇ ಹೆಸರಾದರು.

ವಿಶೇಷವೆಂದರೆ ಕಿ.ರಂ. ನಾಗರಾಜ ಅವರು ಬರೆದಿರುವುದು ತುಂಬಾ ಕಡಿಮೆ. **"ಪ್ರತಿಷ್ಠಿತ ಶಕ್ತಿ ಮತ್ತು ಕನ್ನಡ ಸಾಹಿತ್ಯ"** ಎಂಬ ಲೇಖನವೊಂದನ್ನು ತಮ್ಮ ಮೂವತ್ತನೆಯ ವಯಸ್ಸಿನಲ್ಲಿ ಬರೆದ ಶ್ರೀಯುತರು ಆನಂತರದ ಸುದೀರ್ಘಾವಧಿಯಲ್ಲಿ ರಚಿಸಿರುವ ಸೃಜನಶೀಲ ಕೃತಿಗಳೆಂದು ವಿಭಾಗಿಸಿಕೊಳ್ಳಬಹುದಾದುವೆಂದರೆ ಅವರು ಬರೆದಿರುವ **'ಕಾಲಜ್ಞಾನಿ ಕನಕ'** ಮತ್ತು **'ನೀಗಿಕೊಂಡ ಸಂಸ'** ಎಂಬೆರಡು ನಾಟಕಗಳು ಮಾತ್ರ. ಉಳಿದಂತೆ ಸಾಹಿತ್ಯ ವಿಮರ್ಶೆ ಮತ್ತು ಸಂಸ್ಕೃತಿ ಚಿಂತನೆಗಳಿಗೆ ಸಂಬಂಧಿಸಿದಂತೆ ಸರಿಸುಮಾರು ಇಪ್ಪತ್ತೈದು ವಿದ್ವತ್ಪೂರ್ಣ ಲೇಖನಗಳನ್ನು ರಚಿಸಿರುವರಾದರೂ ಅವುಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುವಲ್ಲಿ ಅವರು ತೋರಿಸುವ ಅನಾಸಕ್ತಿ ಕೂಡ ಕುತೂಹಲಕಾರಿಯಾಗಿದೆ. ಈ ಲೇಖನಗಳು ಕಿ.ರಂ. ಅವರ ಮರಣಾನಂತರ ಕರ್ನಾಟಕ ಸರ್ಕಾರದ ಪುಸ್ತಕ ಅಭಿವೃದ್ಧಿ ಪ್ರಾಧಿಕಾರದಿಂದ **"ತೆರೆದಪಠ್ಯ"** ಎಂಬ ಶೀರ್ಷಿಕೆಯ ಮೇಲೆ ಹೇಳಿದ ಮೂರೂ ಕೃತಿಗಳನ್ನೊಳಗೊಂಡಂತೆ ಸಮಗ್ರವಾಗಿ ಪ್ರಕಟಿತಗೊಂಡಿದೆ. ಕಿ.ರಂ. ಅವರ ಬದುಕು-ಬರಹಗಳ, ವಿದ್ವತ್ತಿನ ಪರಿಚಯವುಳ್ಳವರಿಗೆ ಸಂತಸ ತರುವ ಸಂಗತಿಯಿದು. ಮಾತ್ರವಲ್ಲ ಮುಂದಿನ ಪೀಳಿಗೆಗೆ ನಾವು ಬಳಸಿಕೊಟ್ಟಿರುವ ಅಮೂಲ್ಯ ಆಕರ ಗ್ರಂಥವಿದು. ಅವರ ಸೃಜನಶಕ್ತಿ ಮತ್ತು ಆ ಮೂಲಕ ವ್ಯಕ್ತಗೊಂಡಿರುವ ಧೀಮಂತ ವಿದ್ವಾಂಸರ ತಾತ್ವಿಕ ನಿಲುವುಗಳನ್ನು ಸಂಶೋಧನಾ ವಿಧಿವಿಧಾನಗಳ ಮುಖೇನ ಮುಖಾಮುಖಿಯಾಗುವಲ್ಲಿ ಪ್ರಸ್ತುತ ಅಧ್ಯಯನವು ಆಸಕ್ತವಾಗಿದೆ.

ತಮ್ಮ ವಿಮರ್ಶಾ ಪ್ರಜ್ಞೆ, ಸಾಹಿತ್ಯ ನಂಬಿಕೆಗಳು ಹಾಗೂ ಸಾಹಿತ್ಯದ ಕುರಿತು ತಾವೇ ರೂಪಿಸಿಕೊಂಡಿದ್ದ ನೈತಿಕ ಪ್ರಶ್ನೆಗಳು ತೀಕ್ಷವಾಗಿದ್ದ ಗಳಿಗೆಗಳಲ್ಲಿ ಯಾವ ಸಿದ್ಧಾಂತವನ್ನಾದರೂ ಮುಖಾಮುಖಿಯಾಗಲು ಸಿದ್ಧರಿದ್ದ ಕಿ.ರಂ ನಾಗರಾಜ ಅವರು ಬರೆದಿರುವ **"ಪ್ರತಿಷ್ಠಿತ ಶಕ್ತಿ ಮತ್ತು ಕನ್ನಡ ಸಾಹಿತ್ಯ"** ಎಂಬ ಕಿರುಹೊತ್ತಿಗೆಯ ಕನ್ನಡ ಸಾಹಿತ್ಯವು ಭಾಷೆ, ತಾತ್ವಿಕತೆ, ಸಾಹಿತ್ಯ ರಚನೆ

ಮುಂತಾದ ವಲಯಗಳಲ್ಲಿ ಪ್ರತಿಷ್ಠಿತ ಶಕ್ತಿಗಳನ್ನು ಎದುರಿಸಿರುವ ರೀತಿಯನ್ನು ಲೇಖಕರು ಶೋಧಿಸಲೆತ್ನಿಸಿದ್ದಾರೆ. ಕಿ.ರಂ ಅವರ ಬೌದ್ಧಿಕ ಕಾಳಜಿಗಳು ಹಾಗೂ ಅವರು ಮುಂದೆ ಬೆಳೆಸಲೆತ್ನಿಸಿದ ಅಕಾಡೆಮಿಕ್ ಪ್ರತಿಭಟನೆಗಳ ಮುನ್ಸೂಚನೆಯನ್ನು ಆರಂಭದ ಈ ಕೃತಿಗಳಲ್ಲೇ ದಾಖಲಿಸಿರುವುದನ್ನು ಕಾಣಬಹುದು. ಇಪ್ಪತ್ತನೇ ಶತಮಾನದ ಎಪ್ಪತ್ತರ ದಶಕಗಳಲ್ಲಿ ಕನ್ನಡ ಸಾಹಿತ್ಯವನ್ನು, ಸಾಹಿತ್ಯಾಧ್ಯಯನವನ್ನು ನಿಯಂತ್ರಿಸಲೆತ್ನಿಸಿದ ಸೀಮಿತ ಚೌಕಟ್ಟುಗಳ ಅಕಾಡೆಮಿಕ್ ವಲಯಗಳು, ಮಾರ್ಕೆಟ್ ಶಕ್ತಿಗಳು, ಫಂಡಿಂಗ್ ಏಜೆನ್ಸಿಗಳು, ಜಾನಪದ ಹಾಗೂ ಭಾಷಾವಿಜ್ಞಾನಗಳ ಜಡ ಸ್ಥಾಪಿತ ಅಧ್ಯಯನ ಮಾರ್ಗಗಳು ಮುಂತಾದ 'ಪ್ರತಿಷ್ಠಿತ' ನಿಯಂತ್ರಕ ಶಕ್ತಿಗಳನ್ನು ಕಿ.ರಂ ಅವರು ಇಲ್ಲಿ ಪ್ರಶ್ನಿಸಿದ್ದಾರೆ. ಈ ಮೇಲೆ ಸೂಚಿಸಿರುವಂತೆ ಕಿ.ರಂ ಈ ಕೃತಿಯನ್ನು ರಚಿಸಿರುವುದು ಅವರ ಮೂವತ್ತರ ಹರಯದಲ್ಲಿ ಆ ಪ್ರಾಯದಲ್ಲೇ ಪ್ರಕಟವಾಗಿರುವ ಅವರ- ಚಿಂತನಕ್ರಮ ಸೃಜನಶೀಲ ಕೃತಿಗಳಲ್ಲಿ ಆವಿರ್ಭವಿಸಿರಬಹುದಾದ ಶಿಖರ ಪ್ರಾಯ ಕೆನೆಗಟ್ಟಿದೆ ತಾತ್ವಿಕ ನಿಲುವು ಅತ್ಯಂತ ಪ್ರಮುಖವಾದುದು. ಆದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಕಿ.ರಂ ಅವರ 'ಕಾಲಜ್ಞಾನಿ ಕನಕ' ಮತ್ತು 'ನೀಗಿಕೊಂಡ ಸಂಸ' ಎಂಬೆರಡು ನಾಟಕಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಿಕೊಳ್ಳಲಾಗಿದೆ. ಸೃಜನಶೀಲವೆಂದು ಪ್ರತ್ಯೇಕಿಸಬಹುದಾದ ಬರಹಗಳು ಈ ನಾಟಕಗಳು ಮಾತ್ರವೇ. ಕನ್ನಡ ನಾಟಕ ಸಾಹಿತ್ಯದಲ್ಲಿ ಈ ಎರಡು ನಾಟಕಗಳಿಗಿರುವ ಸ್ಥಾನವನ್ನೂ ರಂಗಭೂಮಿಯ ಅನಂತ ಸಾಧ್ಯತೆಗಳಿಗೆ ಇವು ನೆಲೆಯಾದಾಗಿಸಿರುವ ಬಗೆಯನ್ನು ಸಂಶೋಧಕನ ಚಿಕಿತ್ಸಕ ದೃಷ್ಟಿಕೋನದಿಂದ ವಿಶ್ಲೇಶಿರುವುದು ಇಲ್ಲಿನ ಆದ್ಯ ಉದ್ದೇಶ.

ಮತ್ತೊಂದು ಮಹತ್ವದ ವಿಚಾರವೆಂದರೆ ಕಿ.ರಂ ನಾಗರಾಜ ಅವರು ತಮ್ಮ ವ್ಯಕ್ತಿತ್ವದ ಪ್ರತಿಬಿಂಬವೇ ಎಂಬಂತೆ ಈ ನಾಟಕಗಳನ್ನು ರಚಿಸಿರುವುದು. ವೈದಿಕತೆಯ ಕಟ್ಟಾ ವಿರೋಧಿಯಾಗಿದ್ದ ಕಿ.ರಂ ಅವರ ಸಾರ್ವಜನಿಕ ಚಿಂತನೆ 'ಕಾಲಜ್ಞಾನ ಕನಕ' ನಾಟಕದಲ್ಲಿ ಅನಾವರಣಗೊಂಡಿದೆ. ಈ ನಾಟಕ ಬರೆಯುತ್ತಿದ್ದ ಕಾಲದಲ್ಲಿ ನಮ್ಮ ದೇಶದಲ್ಲಿ ವಿಕಾರವಾಗಿ ಹಬ್ಬುತ್ತಿದ್ದ ಮಂದಿರ ಕೇಂದ್ರಿತ ಹಾಗೂ ಮಠ ಕೇಂದ್ರಿತ ರಾಜಕೀಯದ ವಿರುದ್ಧ ಕಿ.ರಂ ಅವರ

ಪ್ರತಿಭಟನೆ, ಯುದ್ಧ ವಿರೋಧಿ ಚಿಂತನೆಗಳು, ಸಂಸ್ಕೃತ ಹಾಗೂ ಕನ್ನಡಗಳ ನಡುವಣ ಸಂಘರ್ಷಗಳು ಈ ನಾಟಕದ ತುಂಬಾ ಆವರಿಸಿಕೊಂಡಿವೆ. ಸೃಜನಶೀಲ ಮನಸ್ಸೊಂದರ ವರ್ತಮಾನದ ಪ್ರತಿಕ್ರಿಯೆಗಳು ಕನಕನ ವಿಚಾರಗಳೊಂದಿಗೆ ಮೇಳೈಸಿರುವ ಪರಿ ತನ್ನ ಸ್ವೋಪಜ್ಞತೆಯಿಂದ ಗಮನಾರ್ಹವೆನಿಸಿದೆ. ಅಂತೆಯೇ ಕನ್ನಡದ ವಿಶಿಷ್ಟ ನಾಟಕಕಾರರಾಗಿದ್ದ 'ಸಂಸ'ರನ್ನು ಕುರಿತು 'ನೀಗಿಕೊಂಡ ಸಂಸ' ನಾಟಕವು ಕನ್ನಡ ಸಾಹಿತ್ಯದ ಸಂದರ್ಭದಲ್ಲೇ ವಿಶಿಷ್ಟವಾದುದು ಮತ್ತು ಮಹತ್ವದ್ದು. ತಮ್ಮ ಸಮಕಾಲೀನ ಸಂದರ್ಭದ ಹಿರಿಯ ತಲೆಮಾರಿನ ಲೇಖಕನೊಬ್ಬನನ್ನು ಕುರಿತು ಕನ್ನಡದಲ್ಲಿ ಇನ್ಯಾವ ನಾಟಕವೂ ರಚಿತಗೊಂಡಿಲ್ಲ. ಇದಕ್ಕೆ ತಮ್ಮ ಜೀವನದಲ್ಲಿ ಜುಗುಪ್ಸೆ ಹೊಂದಿ ಆತ್ಮಹತ್ಯೆಗೆ ಶರಣಾದ ಅಪೂರ್ವ ಪ್ರತಿಭೆಯ ನಾಟಕಕಾರರೆನಿಸಿದ್ದ ಸಂಸರ ವಿಕ್ಷಿಪ್ತ ಬದುಕು ಕಿ.ರಂ ಅವರನ್ನು ಈ ನಾಟಕ ರಚನೆಗೆ ಪ್ರೇರೇಪಿಸಿದಂತಿದೆ. ಕನ್ನಡದ ನಾಟಕ ಲೇಖಕನೊಬ್ಬನ ಖಾಸಗಿ ತಲ್ಲಣಗಳನ್ನು, ಅವನು ತನ್ನನ್ನು ತಾನು ನೀಗಿಕೊಳ್ಳಲು ಕಾರಣವಾದ ಶಕ್ತಿಗಳ ಶೋಧವನ್ನು ಕಿ.ರಂ ಈ ನಾಟಕದ ಮೂಲಕ ಮಾಡಲೆತ್ನಿಸಿದ್ದಾರೆ. ಚಾರಿತ್ರಿಕ ಪುರುಷನಾದ ಕನಕನ 'ಸಂಕ'ತನದ ಬದುಕು, ವಿಕ್ಷಿಪ್ತ ಮನಸ್ಸಿನ ನಾಟಕಕಾರನಾದ 'ಸಂಸ'ರ ಬಗೆಗೆ ನಾಟಕಕಾರರಿಗಿರುವ ಸಹಾನುಭೂತಿ ಈ ನಾಟಕಗಳಲ್ಲಿ ಅನಾವರಣಗೊಂಡಿರುವ ಬಗೆ ಅನ್ಯಾದೃಶ್ಯವಾದುದು. ಇದು ಹೊಸ ಅಧ್ಯಯನಕ್ಕೆ ಆಹ್ವಾನ ನೀಡುವಂತಿದೆಲ್ಲದೆ ಆ ಮೂಲಕ ಕನ್ನಡ ನಾಟಕ ಸಾಹಿತ್ಯದ ಅಧ್ಯಯನಕ್ಕೆ ಹೊಸ ಆಯಾಮವನ್ನು ಒದಗಿಸಬಲ್ಲದಾಗಿದೆ. ಉದಾಹರಣೆಗೆ: **"ನೀಗಿಕೊಂಡ ಸಂಸ"** ನಾಟಕದಲ್ಲಿ ಕಿ.ರಂ ಅವರು ಸಂಸರ ನಾಟಕಗಳನ್ನು, ಜೀವನದ ವಿವರಗಳನ್ನು ಪ್ರಜ್ಞಾಪೂರ್ವಕವಾಗಿ ಅಂತರಪಠ್ಯವಾಗಿಸಿ ಹೊಸ ನಾಟಕವೊಂದು ಮೈದಾಳುವಂತೆ ಮಾಡಿರುವ ಕ್ರಮ ಅತ್ಯಂತ ಮಹತ್ವದ ಪ್ರಯೋಗವಾಗಿರುವುದು.

ಪುರೋಹಿತಶಾಹಿಯು ಕನಕನ ಪ್ರತಿಭೆ–ಪಾಂಡಿತ್ಯಗಳನ್ನು ಕೀಳಾಗಿ ಕಂಡ ಬಗೆ, ಇಪ್ಪತ್ತನೇ ಶತಮಾನದ ಮೊದಲ ಭಾಗದಲ್ಲಿ ಆ ಕಾಲದ ಪಂಡಿತೋತ್ತಮರ ನಡುವೆ ಹಿನ್ನೆಲೆಗೆ ಸರಿದಂತಿದ್ದ 'ಅಕಡೆಮಿಕ್' ಅಲ್ಲದ ಸಂಸರಂತಹ ಬುದ್ಧಿಜೀವಿಗಳ ಬಗೆಗೆ ಕಿ.ರಂ ಅವರಿಗಿದ್ದ ಗೌರವ, ಕಾಳಜಿ, ಆಕರ್ಷಣೆ ಕೂಡ **'ಕಾಲಜ್ಞಾನಿ ಕನಕ' ಮತ್ತು 'ನೀಗಿಕೊಂಡ ಸಂಸ'** ನಾಟಕಗಳಿಗೆ ಪ್ರೇರೇಪಣೆಯನ್ನು ಒದಗಿಸುವ ಸಾಧ್ಯತೆಗಳನ್ನು ಅಭ್ಯಸಿಸುವ ವಿಫುಲ ಅವಕಾಶಗಳಿವೆ. ಜಡ ಪಂಡಿತರನ್ನು, ಅವರು ಚರಿತ್ರೆಯನ್ನು ಓದುವ ಹುಂಬ ರೀತಿಗಳನ್ನು ಸಂಸರ ಪಾತ್ರ ಗೇಲಿ ಮಾಡುತ್ತದೆ. ಒಂದು ಸಂದರ್ಭದಲ್ಲಿ ಸಂಸರ ಬಾಯಲ್ಲಿ ಬರುವ ಕವಿತೆಯ ಸ್ವರೂಪ ಕುರಿತ ಮಾತು ಕಿ.ರಂ ತಮ್ಮ ವಿಮರ್ಶೆಯಲ್ಲಿ ಅನೇಕ ಸಲ ಮಾಡಿದ ಕಾವ್ಯ ವ್ಯಾಖ್ಯಾನದಂತೆಯೇ ಇದೆ:

"ಕವಿತೆ!

ಅದು ವಿವಿಧ ಸ್ವರಗಳಿಂದಾದ ಭಾಷೆ.

ವಿವಿಧ ಪದಗಳಿಂದ ಆದ ಬೇರೆಯದೇ ಆದ ಭಾಷೆ.

ಅದರ ವಿನ್ಯಾಸ, ಅದರ ಬಣ್ಣ.....ಅದರ ಮೈಯಲ್ಲಿ ಸೇರಿರುವ

ಶರೀರಕ್ಕೆ ಒಪ್ಪುವ ಚಲವೆ

ಜಗತ್ತಿನ ಪ್ರಕೃತಿಯನ್ನೇ ತೂಗಾಡಿಸುವ ಅದರ ಜೀವ.

ಇಷ್ಟೇ ಅಲ್ಲದೆ...... ಇನ್ನೂ ಯಾವ್ಯಾವುದೋ ಭಾಷೆ......

ಅದೇ ಕವಿತೆಯ ಭಾಷೆ "– ಇದರ ಜೊತೆಗೆ ವಸಾಹತುಶಾಹಿ ಕುರಿತ ಪ್ರತಿಕ್ರಿಯೆಗಳನ್ನೂ "ನೀಗಿಕೊಂಡ ಸಂಸ" ನಾಟಕದ ರಣಧೀರನ ಮಾತಿನ ಮೂಲಕ ಬೆಳೆಸಿರುವ ರೀತಿ ಕೂಡ ಕಿ.ರಂ. ಅವರು 'ಅನುಭಾವ ಸಾಹಿತ್ಯ' ಕುರಿತು ಬರೆದ ಬರಹದಲ್ಲಿ ಆರಂಭಿಸಿದ ನಿರ್ವಸಾಹತೀಕರಣದ ಚಿಂತನೆಗಳ ಭಾಗವಾಗಿರುವುದನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗುವುದು.

ಈ ಎರಡು ನಾಟಕಗಳಲ್ಲಿ ಬೇರೆ ಬೇರೆ ಬಗೆಯ ಪ್ರತಿಷ್ಠಿತ ಶಕ್ತಿಗಳನ್ನು ಎದುರಾಗುವ ಎರಡು ಕೇಂದ್ರ ಪಾತ್ರಗಳಿವೆ. ಕನಕ ಸಂಸ್ಕೃತ ಪಂಡಿತರನ್ನು, ದೇವಸ್ಥಾನವನ್ನು ಹಿಡಿತದಲ್ಲಿಸಿಕೊಂಡು ಪುರೋಹಿತರನ್ನು ಎದುರಾಗುತ್ತಾನೆ. ಅದೇರೀತಿ ಸಂಸ ತನ್ನ ಕಾಲದ ಸಾಹಿತ್ಯ ಸಂಸ್ಥೆಗಳು ಹಾಗೂ ಪೊಲೀಸ್ ಹಾಗೂ ವಸಾಹತು ಪ್ರಭುತ್ವವನ್ನು ಎದುರಾಗಲು ಇನ್ನಿಲ್ಲದಂತೆ ಯತ್ನಿಸಿ ವಿಫಲನಾಗುತ್ತಾನೆ. ಈ ಎದುರಾಗುವಿಕೆ ಅನುಸಂಧಾನದ ಮಾರ್ಗದಲ್ಲಿ ಕಿ.ರಂ ಅವರನ್ನು ಮುನ್ನಡೆಸುವ ಬಗೆಯೂ ಅತ್ಯಂತ ಕುತೂಹಲಕರವೇ.

ಈ ಮೇಲೆ ವಿವರಿಸಲಾದ ಎಲ್ಲ ಸಂಗತಿಗಳೊಂದಿಗೆ ಕಿ.ರಂ ಅವರ ವಿದ್ವತ್ತಿನ ಕಿರಣಗಳ ಪ್ರಭೆ ಹೊಳಹಿಸಿರುವ ಅನೇಕ ಸಂಗತಿಗಳನ್ನು ಈ ಅಧ್ಯಯನದೊಂದಿಗೆ ಅನುಷಂಗಿಕವಾಗಿ ಚರ್ಚಿಸುವ ಉದ್ದೇಶವನ್ನು ಪ್ರಸ್ತುತ ಅಧ್ಯಯನವು ಕೇಂದ್ರೀಕರಿಸಿದೆ. ಬಗೆ ಬಗೆಯ ಜ್ಞಾನಶಾಖೆಗಳ ಅರಿವು ಸಾಹಿತ್ಯ ಹಾಗೂ ಸಾಂಸ್ಕೃತಿಕಗಳ ಗ್ರಹಿಕೆಗೆ ಅತ್ಯಗತ್ಯ ಎಂಬುದನ್ನು ಕಿ.ರಂ ಸದಾ ಪ್ರತಿಪಾದಿಸುತ್ತಿದ್ದರು. ಆದ್ದರಿಂದಲೇ ಕಿ.ರಂ ಅವರ ಓದಿನಲ್ಲಿ ಒಂದು ಆಳವಾದ ಹಾಗೂ ಸಹಜವಾಗಿ ಕಾಣುವ ಅಂತರ್ ಪಠ್ಯೀಯ ಬೆಸುಗೆ ಕಾಣಿಸುತ್ತದೆ. ಒಬ್ಬ ಕವಿಯ ಕುರಿತು ಮಾತನಾಡುವಾಗಲೂ ಕಿ.ರಂ ಇಡೀ ಸಾಹಿತ್ಯ ಪರಂಪರೆಯನ್ನು ಹಿನ್ನೆಲೆಯಲ್ಲಿಟ್ಟು ತೂಗುತ್ತಿದ್ದರೆಂಬುದನ್ನು ಮರೆಯುವಂತಿಲ್ಲ. ನಿರ್ದಿಷ್ಟ ವಿಮರ್ಶಾ ಚೌಕಟ್ಟುಗಳ ಮೂಲಕ

ಕೃತಿಯೊಂದನ್ನು ಓದುವ ಕ್ರಮದ ಹಾಗೆಯೇ ವಿವಿಧ ಸಾಹಿತ್ಯ ಕೃತಿಗಳ ಜೊತೆಜೊತೆಗೆ ಸಾಹಿತ್ಯ ಕೃತಿಗಳನ್ನು ಓದುವ ಕ್ರಮಕ್ಕೆ ಅವರು ಮುನ್ನುಡಿ ಬರೆದರೆಂಬುದನ್ನು ನೆನೆದರೆ ಪ್ರಸ್ತುತ ಅಧ್ಯಯನಕ್ಕೆ ಅಗತ್ಯವಾದ ವೈಧಾನಿಕತೆ ಯಾವ ಬಗೆಯೆಂಬುದು ಸ್ಪಷ್ಟವಾಗುತ್ತವೆ. ಕಿ.ರಂ. ಹಾಕಿಕೊಟ್ಟ ಈ ಮಾರ್ಗದಲ್ಲೇ ಅವರ ಎರಡೂ ನಾಟಕಗಳನ್ನು ಅಧ್ಯಯನ ಮಾಡಲು ಈ ಸಂಶೋಧನೆಯ ಆಸಕ್ತವಾಗಿದೆ.

# ಅಧ್ಯಾಯ-೨

## ಕಿ.ರಂ. ಅವರ 'ಕಾಲಜ್ಞಾನಿ ಕನಕ' : ಪ್ರತಿಷ್ಠಿತ ಶಕ್ತಿಯೊಂದಿಗಿನ ಮುಖಾಮುಖಿ

ಕನಕದಾಸರು ೧೬ನೇ ಶತಮಾನದಲ್ಲಿ ಜೀವಿಸಿದ್ದ ಹರಿಸಾದ ಸಾಹಿತ್ಯ ಸಂದರ್ಭದ ಮಹತ್ತ್ವದ ಕವಿ. ಕೀರ್ತನೆಗಳ ಜೊತೆಗೆ ಮುಂಡಿಗೆಗಳನ್ನು ರಾಮಧಾನ್ಯ ಚರಿತೆ. ಮೋಹನ ತರಂಗಿಣಿ ನಳಚರಿತ್ರೆ, ಮತ್ತು ಹರಿಭಕ್ತಿ ಸಾರ ಕಾವ್ಯಗಳನ್ನು ಬರೆದಿದ್ದಾರೆ. ವಚನ ಚಳುವಳಿಯಲ್ಲಿ ಶಿವಪಾರಮ್ಯವನ್ನು ಶಿವಶರಣರು ಮೆರೆದಿರುವರಾದರೆ ಹರಿದಾಸರು ಹರಿಯ ಮಹತ್ತ್ವವನ್ನು ಮೂಲಭಿತ್ತಿಯಾಗಿಸಿಕೊಂಡು ಸಾಹಿತ್ಯ ರಚನೆ ಮಾಡಿದರು. ಈ ಎರಡೂ ಸಾಹಿತ್ಯ ಪರಂಪರೆಯ ಅಂತರಂಗ ಪರಾತ್ಪರ ಶಕ್ತಿಯಲ್ಲಿ ಮಾಡಿದ ಭಕ್ತಿಯ ಬಗೆ ಒಂದೇ, ಹರಿದಾಸ ಪರಂಪರೆಯಲ್ಲಿ ಪುರಂದರ–ಕನಕದಾಸರು ಕನ್ನಡದ ಮೇರು ಪ್ರತಿಭೆಯಾಗಿ ಹೊಳೆದಿದ್ದಾರೆ. ಕುರುಬ ಜನಾಂಗದಲ್ಲಿ ಜನಿಸಿ ಅಧ್ಯಾತ್ಮ ವಲಯದಲ್ಲಿ ನೆಲೆನಿಂತವರು. ಅಂದು ಆಧ್ಯಾತ್ಮಿಕ ವಲಯದಲ್ಲಿ ಕುರುಬರಿಗೆ ಸ್ಥಾನವಿಲ್ಲದ ಕಾಲದಲ್ಲಿ ಕನಕದಾಸರು ಕುರುಬರಾಗಿದ್ದರೂ ವ್ಯಾಸರಾಯರ ಮಠದಲ್ಲಿ ಸ್ಥಾನವನ್ನು ಸಂಪಾದಿಸಿಕೊಂಡಿದ್ದು, ಅವರ ಜ್ಞಾನಗಣ್ಯ, ಭಕ್ತಿ, ವೈರಾಗ್ಯಗಳಿಂದ ಹಾಗೂ ರಚಿಸಿದ ರಸವತ್ತಾದ ಕೀರ್ತನ ಸಾಹಿತ್ಯ ಹಾಗೂ ಇನ್ನಿತರ ಕೃತಿಗಳಲ್ಲಿ ಹರಿಭಕ್ತಿಯೊಡನೆ ಜನರ ವಿಮರ್ಶೆಯೂ ಮೌನವಾಗಿ ಮೂಡಿ, ಕವಿಯ ಸಾಮಾಜಿಕ ಕಳಕಳಿ ಅನನ್ಯವಾಗಿ ಮೂಡಿದೆ.

ಕೆಳವರ್ಗದಿಂದ ಬಂದಿರುವ ಈ ಕವಿಯು ತಮ್ಮ ರಚನೆಗಳ ಮೂಲಕ ತೋರಿದ ದಿಟ್ಟತನ ಅನ್ಯದೃಶವಾದುದು. ಸಮಾಜದ ರೀತಿನೀತಿಗಳನ್ನು ತಿದ್ದುವಲ್ಲಿ ಕುಲ–ಧರ್ಮದ ವಿಚಾರವಾದ ವರ್ತನೆಯನ್ನು ಖಂಡಿಸುವಲ್ಲಿ, ಮೇಲ್ವರ್ಗದವರ ಶೋಷಣೆಯನ್ನು ಧಿಕ್ಕರಿಸುವಲ್ಲಿ ಸಾಮಾಜಿಕ ಸಮಾನತೆಯನ್ನು ಪ್ರತಿಪಾದಿಸುವಲ್ಲಿ ಕನಕದಾಸರು ಉಳಿದ ಹರಿದಾಸರಿಗಿಂತ ಮುಂಚೂಣಿಯಲ್ಲಿದ್ದಾರೆ. ಪುರೋಹಿತಶಾಹಿಯ ದಬ್ಬಾಳಿಕೆಯನ್ನು ವ್ಯಂಗ್ಯವಾಗಿ ವಿಡಂಬಿಸುತ್ತಲೇ ವ್ಯಾಸರಾಯರ ನೇತೃತ್ವದ ಪುರೋಹಿತ ಪ್ರಧಾನ ವಿದ್ವಜ್ಜನರ ಸಭೆಯಲ್ಲಿ ಕೇಂದ್ರಸ್ಥಾನ ಪಡೆದ ಕನಕದಾಸರ ಸಾಧನೆ ಅಪೂರ್ವವಾದುದು. ಸಾಹಿತ್ಯ, ಭಾಷೆ ಮತ್ತು ಬದುಕಿನ ರೀತಿ ಎಲ್ಲದರಲ್ಲಿಯೂ ಸರಳತೆಯನ್ನು ಎತ್ತಿತೋರಿದ, ಅಂತರಂಗದ ನಿಜಭಕ್ತಿಯೇ ಸಮಶ್ರೇಷ್ಠ ನಡೆಯೆಂಬುದನ್ನು ಪ್ರತಿಪಾದಿಸಿದ ಕನಕದಾಸರನ್ನು ಕುರಿತು ಕಿ.ರಂ. ನಾಗರಾಜ ಅವರು ಬರೆದಿರುವ "ಕಾಲಜ್ಞಾನಿ ಕನಕ" ನಾಟಕವು ಹಲವು ಕಾರಣಗಳಿಂದ ಅಧ್ಯಯನಾಸಕ್ತರ ಗಮನಸೆಳೆದಿವೆ. ಕಿ.ರಂ ವಿಚಾರಧಾರೆಗೆ ಕನಕನ ಸಾಹಿತ್ಯ ಪ್ರೇರಣೆಯನ್ನೊದಗಿಸಿರುವುದು ಇದಕ್ಕೆ ಕಾರಣವಿರಬಹುದು.

ವಚನ ಚಳುವಳಿ ಮತ್ತು ಹರಿದಾಸ ಚಳುವಳಿಗಳಿಗೆ ಮೂಲ ಪ್ರೇರಣೆಯೆಂದರೆ ಧರ್ಮಶ್ರದ್ಧೆ ಹಾಗೂ ಭಕ್ತಿ ಎಂಬುದು ಸುಸ್ಪಷ್ಟ, ವಚನ ಚಳುವಳಿಗೆ ಹರ (ಶಿವ) ಭಕ್ತಿ ಮೂಲದ್ರವ್ಯವಾದರೆ, ಹರಿದಾಸ ಚಳುವಳಿಗೆ ಹರಿಭಕ್ತಿಯೇ ಮೂಲದ್ರವ್ಯ. ವಚನಕಾರರು ಸಂಪ್ರದಾಯವನ್ನು ಪ್ರಶ್ನಿಸಿದಷ್ಟು, ಪ್ರತಿಭಟಿಸಿದಷ್ಟು ದಿಟ್ಟತನವನ್ನು ಹರಿದಾಸ ಚಳುವಳಿ ತೋರಿಸಲಿಲ್ಲವೆಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. ಆದರೆ ಕನಕದಾಸರು ಇದಕ್ಕೆ ಅಪವಾದವಾಗಿದ್ದರೆನ್ನಬಹುದು, ಅಪ್ರತಿಷ್ಠ ಸಾಮಾಜಿಕ ನೆಲೆಯಿಂದ ಬಂದು ಸೇರಿಕೊಂಡ ಕನಕದಾಸರು ಅಂದಿನ ಇತರ ಪ್ರಮುಖರೊಂದಿಗೆ ಹೆಗಲೆಣೆಯಾಗಿ ನಿಂತವರು. ಈ ಮೊದಲೇ ಹೇಳಿದಂತೆ ಕನಕದಾಸರು ಉಳಿದವರಂತೆ ಬರೀ ದಾಸರಷ್ಟೇ ಅಲ್ಲ. ಅವರು ಕವಿಗಳೂ ಕೂಡ ಅವರು ತಮ್ಮ ಕೀರ್ತನೆಗಳ ಮೂಲಕ ಹರಿದಾಸ ಪರಂಪರೆಯಲ್ಲಿ ಸುಭದ್ರವಾದ ಸ್ಥಾನ ಗಳಿಸಿಕೊಂಡಂತೆಯೇ ತಮ್ಮ ಕಾವ್ಯ ನಿರ್ಮಿತಿಯಿಂದ ಕನ್ನಡ ಸಾಹಿತ್ಯ ಪರಂಪರೆಯಲ್ಲಿಯೂ ವಿಶಿಷ್ಟವಾದ ಸ್ಥಾನ ಗಳಿಸಿಕೊಂಡವರು.

ಕನಕದಾಸರ ಇತಿವೃತ್ತದ ಬಗ್ಗೆ ಅನೇಕ ಐತಿಹ್ಯಗಳಿವೆ. ಸಾಹಿತ್ಯ ಚರಿತ್ರೆಕಾರರು ಈ ಐತಿಹ್ಯಗಳನ್ನು ಆಧರಿಸಿಯೇ ಕನಕದಾಸರ ವಿಚಾರಗಳನ್ನು ಸಾಹಿತ್ಯ ಚರಿತ್ರೆಯಲ್ಲಿ ದಾಖಲಿಸಿದ್ದಾರೆ. ಕಿ.ರಂ. ನಾಗರಾಜ ಅವರೂ ಕೂಡ ಈ ಐತಿಹ್ಯಗಳನ್ನು ಆಧರಿಸಿಯೇ 'ಕಾಲಜ್ಞಾನಿ ಕನಕ' ನಾಟಕವನ್ನು ರಚಿಸಿರುವರಾದರೂ ಮೂಲ ಐತಿಹ್ಯಗಳಿಗೆ ವೈಚಾರಿಕ ಪ್ರಖರತೆಯ ಹೊಳಹನ್ನು ನೀಡಿರುವುದು ಅತ್ಯಂತ ಪ್ರಮುಖವಾದ ವಿಚಾರ. ಕನಕನ ಚಿಂತನೆಗಳೊಂದಿಗೆ ಇಲ್ಲಿ ಕಿ.ರಂ. ಅವರ ವಿಚಾರಧಾರೆಗಳೂ ಮೇಳೈಸಿಕೊಂಡು ಇಬ್ಬಗೆಯ ಪ್ರತಿಭೆಯ ಅಭಿವ್ಯಕ್ತಿಯಾಗಿ ಈ ನಾಟಕ ರೂಪುಗೊಂಡಿವೆ. ಕಿ.ರಂ. ಅವರು ಪ್ರಸ್ತುತ ಕೃತಿಯನ್ನು ರಚಿಸುವಾಗ ಕೇವಲ ಸಾಹಿತ್ಯ ಚರಿತ್ರೆಯಲ್ಲಿನ ದಾಖಲೆಗಳನ್ನು ಮಾತ್ರ ಆಧರಿಸದೆ, ಕನಕನ ಕೃತಿಗಳ ಅಂತರಂಗವನ್ನು ಹೊಕ್ಕು ಅವನ್ನು ಅಂತರ್‌ಪಥ್ಯವಾಗಿಸಿಕೊಂಡಿರುವುದು ಇಲ್ಲಿ ಗಮನಿಸಬೇಕಾದ ಮತ್ತೊಂದು ಮುಖ್ಯ ಅಂಶ. ಮೂಲತಃ ವಿಜಯನಗರ ಸಾಮ್ರಾಜ್ಯದರಸರ ದಳಪತಿಯಾಗಿದ್ದ ಕನಕನಾಯಕ ಯುದ್ಧ ವಿರೋಧಿ ನಿಲುವನ್ನು ಕಳೆದು ಕನಕದಾಸನಾಗುವ ಮನಃಪರಿವರ್ತನೆ ಅತ್ಯಂತ ಪ್ರಮುಖವಾದ ಘಟ್ಟ.

ಧಾರವಾಡ ಜಿಲ್ಲೆಯ 'ಬಾಡ'ವೆಂಬ ಗ್ರಾಮದ ದಳಪತಿಯಾಗಿದ್ದ ಕನಕನಾಯಕ ಪೂರ್ವದಲ್ಲಿ ಪರಾಕ್ರಮವನ್ನು ಮೆರೆದು, ಯುದ್ಧ ವೀರನೆನಿಸಿರುತ್ತಾನೆ. ಯುದ್ಧವೀರನಾಗಿದ್ದ ಕನಕ ಯುದ್ಧದಲ್ಲಿ ಗೆದ್ದಾಗ ಅವರಿಂದಾದ ಮಾರಣ ಹೋಮವನ್ನು ನೋಡಿ ಅವನ ಮನಃ

ಪರಿವರ್ತನೆಯಾಗಿ ಊರು ತೊರೆದು ಮನೆ-ಸಂಸಾರವನ್ನು ತೊರೆದು ಬಯಲನ್ನು ಆಲಯ ಮಾಡಿ ತನ್ನ ಅನುಭವಗಳನ್ನು ವಿಚಾರವೆಂಬ ಮಿಮಾಂಸೆಯಲ್ಲಿ ಮಥಿಸಿ, ಹರಿದಾಸನಾಗಿ, ದಾಸ್ಯ ವಿರೋಧಿಯಾಗುತ್ತಾನೆ.

ಮತ, ಜಾತಿ, ಮತಗಳನ್ನು ತನ್ನ ಕೀರ್ತನೆಗಳ ಮೂಲಕ, ಕಾವ್ಯದ ಮೂಲಕ ಉಗ್ರವಾದ ವಿಮರ್ಶೆಗೆ ಗುರಿಪಡಿಸುತ್ತಾನೆ. ಕಿ.ರಂ ಕನಕನನ ಕೀರ್ತನೆಗಳನ್ನು ಮತ್ತು ರಾಮಧಾನ್ಯ ಚರಿತೆಯನ್ನು 'ಕಾಲಜ್ಞಾನಿ ಕನಕ'ದ ರಚನೆಗೆ ಆಧರಿಸಿದ್ದಾರೆ. ಇಲ್ಲಿಯ ಭಾಷೆ ಸತ್ವಯುತವಾದುದಷ್ಟೇ ಅಲ್ಲ. ಕಾವ್ಯಮಯವೂ ಅರ್ಥಪೂರ್ಣವೂ ಆದುದು. ಈ ವಿಚಾರಗಳನ್ನು ಮುಂದೆ ವಿವರವಾಗಿ ಚರ್ಚಿಸಬಹುದು.

ಕನಕನಾಯಕ ವಿಜಯನಗರದ ಅರಸರ ಪರವಾಗಿ ಯುದ್ಧಕ್ಕೆ ಹೋಗಿ ಯುದ್ದದಲ್ಲಿ ಗೆದ್ದು ಬಂದಾಗ "ಬಾಡ"ದ ಪ್ರಜೆಗಳು ಕನಕನಾಯಕರಿಗೆ ಜಯವಾಗಲಿ, ಕನಕನಾಯಕ ನೂರ್ಕಾಲ ಬಾಳಲಿ ಎಂದೆಲ್ಲಾ ಅವನನ್ನು ಸ್ವಾಗತಿಸಿ ಹೋಗಳಿದಾಗ ಕನಕನಾಯಕ ಆಡುವ ಮಾತುಗಳು ಇಂತಿವೆ:

"ನನ್ನ ಪ್ರೀತಿಯ ನಾಡಿನ ಬಾಂಧವರೇ ...... ಅಲ್ಲ ...... ಅಲ್ಲ ಗೆಳೆಯರೇ...... ಮನುಷನ ವೃಕ್ಷದ ಹೂವು ಹಣ್ಣುಗಳೇ, ನಿಮ್ಮ ಪ್ರೀತಿಯ ಸ್ವಾಗತಕ್ಕೆ ನಾನು ಅರ್ಹನಲ್ಲಿ ನನ್ನ ಪರಾಕ್ರಮವನ್ನು ಕುರಿತು ಹಾಡಿಹೊಗಳಿದ್ದೀರಿ. ಇದಕ್ಕೆ ನಾನು ಕೃತಜ್ಞತೆಗಳನ್ನು ಸೂಚಿಸಬೇಕೋ, ನಿರಾಕರಿಸ ಬೇಕೋ, ಮೌನದಿಂದ ಇರಬೇಕೋ ತಿಳಿಯುತ್ತಿಲ್ಲ. ಈವರೆಗೂ ಅಧಿಕಾರದ ಮದದಿಂದ ಮೆರೆದಿದ್ದೆ. ಅಹಂಕಾರ ನನ್ನಲ್ಲಿ ಗೂಡು ಕಟ್ಟಿತ್ತು. ಯುದ್ದದಲ್ಲಿ ತೋರುತ್ತಿದ್ದ ನನ್ನ ತೋಳುಬಲಕ್ಕೆ ಈಗ ನಾನೇ ಧಿಕ್ಕಾರ ಹಾಕಿ ಕೂಗಬೇಕೆನಿಸಿತ್ತಿದೆ. ನನ್ನ ಪರಾಕ್ರಮದ ಬಗ್ಗೆ ನನ್ನಲ್ಲಿ ಅಸಹ್ಯ ಹುಟ್ಟಿದೆ. ಯುದ್ದ ಮಾನವ ಲೋಕದ ಮಾಯದ ಗಾಯ. ಈ ಅರಿವು ಕೊಂಚ ಗೊತ್ತಾದದ್ದು ಮೊನ್ನೆಯ ಯುದ್ದರಂಗದಲ್ಲಿ ಪ್ರೇಮಕ್ಕೆ ಮೈಮನಗಳನ್ನು ಕೊಟ್ಟು ನಾನು ಮೊದಲು ನನ್ನ ತಲೆಯನ್ನು ಕೊಡುತ್ತೇನೆ. ಯುದ್ದವನ್ನು ನಿರಾಕರಿಸಿ ನಿಲ್ಲುವ ತೀರ್ಮಾನಕ್ಕೆ, ಬಂದಿದ್ದೇನೆ. ಪ್ರೇಮವಿಲ್ಲದ ಹೃದಯ ಅದೊಂದು ಸುಡುಗಾಡು, ಪ್ರೇಮದಿಂದ ಮನುಷ್ಯರನ್ನು ಕಾಯ್ದುಕೊಳ್ಳುವ ಆಸೆ ನನ್ನಲ್ಲಿ ಮೈದೋರುತ್ತಿದೆ. ನನ್ನ ಒರೆಯಲ್ಲಿ ಪ್ರೇಮ, ಯುದ್ದ ಎರಡೂ ಇದ್ದವು ಆದರೆ....... ಪ್ರೇಮವನ್ನು ನೋಡಲಿಲ್ಲಿ ಕೇಳಲಿಲ್ಲ........"

೨.೧. ಯುದ್ಧ ವಿರೋಧಿ ನಿಲುವು: ಕನಕನ ಮೂಲಕ ಕಿ.ರಂ. ಆಡಿರುವ ಮಾತುಗಳು ಮುಖ್ಯ

ಯುದ್ಧದ ಭೀಕರತೆಯನ್ನು ಅವರಿಂದಾಗುವ ಮನುಕೂಲದ ಹಾನಿಯನ್ನು ಕನಕನ ಮಾತುಗಳ ಮೂಲಕ ವಿರೋಧಿಸಿ ಮನುಕೂಲದ ಅಗತ್ಯ ಪ್ರೇಮವೇ ಹೊರತು ಯುದ್ಧವಲ್ಲ ಎಂಬ ಕಿ.ರಂ ಅವರ ಮಾತು ಈ ಹೊತ್ತಿನ ಜಾಗತಿಕ ತುರ್ತು ಮತ್ತು ಸಾಮಕಾಲಿಕ ಮೌಲ್ಯವಾಗಿರುವುದನ್ನು ಪರಿಭಾವಿಸಬೇಕು.

ಬಹುಶ: ಆಧುನಿಕ ಸಂದರ್ಭದ ವಿಘಟನೆಗಳ ಹಿನ್ನೆಲೆಯಲ್ಲಿ ಕಿ.ರಂ ಈ ಮಾತುಗಳನ್ನು ಬರೆದಿದ್ದಾರೆನ್ನಬಹುದು. ಚಾರಿತ್ರಿಕ ಕನಕ ಸಾಹಿತ್ಯ ಚರಿತ್ರೆಯ ಪುಟಗಳಲ್ಲಿ ಇಷ್ಟು ಪ್ರಖರವಾಗಿ ಅನಾವರಣಗೊಂಡಿಲ್ಲವೆನ್ನಬಹುದು. ಮೈಸೂರು ವಿಶ್ವವಿದ್ಯಾಲಯದ ಕನ್ನಡ ವಿಷಯ ವಿಶ್ವಕೋಶದಲ್ಲಿ ಕನಕದಾಸರ ಬಗ್ಗೆ ನೀಡಿರುವ ಮಾಹಿತಿಗಳು ಇಂತಿವೆ:

"ಕನಕದಾದರ ಕಾಲ ೧೫೦೮-೧೬೦೬. ಪ್ರಸಿದ್ಧ ಹರಿದಾಸರು, ಕೀರ್ತನಕಾರರು ಹಾಗೂ ಕವಿ. ಪುರಂದಸರ ಸಮಕಾಲೀನರೂ ವ್ಯಾಸರಾಯರ ಶಿಷ್ಯರೂ ಆದ ಕನಕದಾಸರು ಧಾರವಾಡ ಜಿಲ್ಲೆಯ ಕಾಗಿನೆಲೆ ಸಮೀಪದಲ್ಲಿ ಇಂದಿಗೂ ವಾಸಿಸುತ್ತಿರುವ ದಾಸರೆಂಬ ಒಂದು ಬುಡಕಟ್ಟಿಗೆ ಸೇರಿದವರಿರಬಹುದೆಂದು ಕೆಲವಗ ಅಭಿಪ್ರಾಯ. ಈ ದಾಸ ಜನಾಂಗದವರು ರಾಮಾನುಜ ಪಂಥದ ಅನುಯಾಯಿಗಳಾಗಿದ್ದರೆಂದೂ ಇದರಿಂದ ಕಸಕದಾಸರು ತಮ್ಮ ಮೋಹನ ತರಂಗಿಣಿಯಲ್ಲಿ ರಾಮಾನುಜಾಚಾರ್ಯರನ್ನೂ ತಾತಾಚಾರ್ಯರನ್ನೂ ಸ್ತುತಿಸಿದ್ದಾರೆ ಎಂದೂ ತರ್ಕಿಸಲಾಗಿದೆ. ತಮ್ಮ ಕೆಲವು ಕೀರ್ತನೆಗಳಲ್ಲಿ ಬೀರೇ ದೇವರನ್ನು ಕೊಂಡಾಡಿರುವದರಿಂದ ಇವರು ಕುರುಬರೆಂದೂ, ಇಲ್ಲವೆ ಬೇಡರ ಬುಡಕಟ್ಟಿನ ನಾಯಕ ಪಂಥದವರೆಂದು ಹೇಳುವವರೂ ಇದ್ದಾರೆ."

ಕಾಗಿನೆಲೆಯಲ್ಲಿ ಹುಟ್ಟಿ ಬೆಳೆದು, ಧಾರವಾಡ ಜಿಲ್ಲೆಯ ಬಾಡವೆಂಬ ಪ್ರದೇಶದಲ್ಲಿ ನಾಯಕರಾಗಿ ಆಳಿತ ನಡೆಸಿ, ಯಾವುದೇ ಒಂದು ಕಾಳಗದಲ್ಲಿ ತನ್ನವರೆಂಬುವರನ್ನೆಲ್ಲ ಕಳೆದುಕೊಂಡು, ಸೋತು, ಪರಮಾತ್ಮನ ಅನುಗ್ರಹದಿಂದ ಚೇತರಿಸಿಕೊಂಡು, ಹರಿದಾಸರಾದಂತೆಯೂ ಅನಂತರ ದೇಶಸಂಚಾರ ಮಾಡುತ್ತಿದ್ದು, ಕೆಲವು ಕಾಲ ಉಡುಪಿ, ಹಂಪೆ, ತಿರುಪತಿ, ಬೇಲೂರುಗಳಲ್ಲಿ ನೆಲಸಿದ್ದಂತೆಯೂ ಇವರ ಕೃತಿಗಳಿಂದ ತಿಳಿಯುತ್ತದೆ. ಕಾಗಿನೆಲೆಯ ಆದಿಕೇಶವ ಕನಕದಾಸರ ಆರಾಧ್ಯ ದೈವ ಆದ್ದರಿಂದ ಅವರ ಕೀರ್ತನೆಗಳ

ಅಂಕಿತವೂ ಇದೇ ಆಗಿದೆ. ಇವರಿಗೆ ತಿಮ್ಮಪ್ಪ, ಕನಕನಾಯಕ ಎಂಬ ಹೆಸರುಗಳಿಂದ್ದಂತೆ ತಿಳಿದುಬಂದರೂ ತಮ್ಮ ಕೃತಿ ಹಾಗೂ ಸಾಧನೆಯಿಂದ ಕನಕದಾಸರೆಂದೇ ಪ್ರಸಿದ್ದಿ ಹೊಂದಿದರು.

ಇವರು ಹಲವು ಪವಾಡಗಳನ್ನು ಮೆರೆದಂತೆ ತಿಳಿಯುತ್ತದೆ, ಉಡುಪಿಯ ಶ್ರೀಕೃಷ್ಣ ದೇವಾಲಯದಲ್ಲಿರುವ ಕನಕನಕಿಂಡಿ ಇಂಥ ಪವಾಡಗಳಲ್ಲಿ ಒಂದೆಂಬ ನಂಬಿಕೆಯಿದೆ. ಕನಕದಾಸರು ಅನೇಕ ಭಾವಪೂರ್ಣ ಕೀರ್ತನೆಗಳನ್ನು ರಚಿಸಿರುವರಲ್ಲದೆ ಮೋಹನ ತರಂಗಿಣಿ, ನಳಚರಿತೆ, ಹರಿಭಕ್ತಿಸಾರ, ರಾಮಧಾನ ಚರಿತೆ, ನೃಸಿಂಹಸ್ಯವ ಎಂಬ ಕೃತಿಗಳನ್ನು ರಚಿಸಿದ್ದಾರೆ. ನೃಸಿಂಹಸ್ತವ ಉಪಲಬ್ದವಿಲ್ಲ ಸಾಹಿತ್ಯ ಚರಿತ್ರೆಯಲ್ಲಿಯೂ ಹೆಚ್ಚು ಕಡಿಮೆ ಈ ಮೇಲಿನ ಸಂಗತಿಗಳೊಂದಿಗೆ ಕನಕದಾಸ ಸಾಹಿತ್ಯ ಕೃತಿಗಳ ವಿವರಣೆ, ವಿಶ್ಲೇಷಣೆ, ವಿಮರ್ಶೆಗಳು ದೊರೆಯುತ್ತವಷ್ಟೇ.

ಈ ಮೇಲಿನ ವಿವರಗಳಲ್ಲಿ ನಮಗೆ ಮುಖ್ಯವಾದುದೆಂದರೆ ಕನಕದಾಸರು "ಕಾಗಿನೆಲೆಯಲ್ಲಿ ಹುಟ್ಟಿ ಬೆಳೆದು, ಧಾರವಾಡ ಜಿಲ್ಲೆಯ ಬಾಡವೆಂಬ ಪ್ರದೇಶದಲ್ಲಿ ನಾಯಕರಾಗಿ ಆಡಳಿತನಡೆಸಿ, ಯಾವುದೋ ಒಂದು ಕಾಳಗದಲ್ಲಿ ತನ್ನವರೆಂಬುವರನ್ನೆಲ್ಲ ಕಳೆದುಕೊಂಡು, ಸೋತು, ಪರಮಾತ್ಮನ ಅನುಗ್ರಹದಿಂದ ಚೇತರಿಸಿಕೊಂಡು ಹರಿದಾಸರಾದರೆಂಬ ಸಂಗತಿ. ಇಲ್ಲಿ ಕನಕ ಸೋತುದರಿಂದ, ತನ್ನವರನ್ನೆಲ್ಲ ಯುದ್ಧದಲ್ಲಿ ಕಳೆದುಕೊಂಡುದರಿಂದ ಯುದ್ಧ ವಿಮುಖವಾಗಿ ಹರಿದಾಸನಾದನೆಂಬ ವಿವರಣೆಗಳಿವೆ.

ಆದರೆ, ಕಿ.ರಂ. ತಮ್ಮ ನಾಟಕದಲ್ಲಿ ಇದನ್ನು ಪರಿವರ್ತನೆ ಕನಕ ಯುದ್ಧದಲ್ಲಿ ಗೆದ್ದ ನಂತರವೇ ಅವನಲ್ಲಿ ಪರಾಕ್ರಮದ ಬಗ್ಗೆ ಅಸಹ್ಯವೂ, ಯುದ್ಧ ವಿನಾಶದ ಬಗ್ಗೆ ಜಿಗುಪ್ಸೆಗಳೂ ಮೂಡಿದವೆಂಬಂತೆ ಸಂದರ್ಭವನ್ನು ಸೃಷ್ಟಿಸಗೊಂಡಿದ್ದಾರೆ. ಆತ ತನ್ನ ಯುದ್ಧ ವಿರೋಧಿ ನೀತಿಯನ್ನು ಹೇಗೆ ನಿರೂಪಿಸುತ್ತಾನೆಂಬುದನ್ನು ಈ ಮೇಲೆ ಗಮನಿಸಿದೆವು. ಇದು ನಾಟಕದ ಆರಂಭದ ದೃಶ್ಯ. ಇಲ್ಲಿಯೇ ಕನಕನಾಡುವ ಯುದ್ಧದ ಧಾರುಣ ವಿನಾಶ ಸ್ಥಿತಿಯನ್ನು ಕುರಿತ ಮಾತುಗಳೂ ಅತಿಮುಖ್ಯ. ಆತ ಹೇಳುವ ಮಾತುಗಳನ್ನು ಸಂಕಲಿಸುವುದಾದರೆ, ಅವು ಈ ಮುಂದಿನಂತಿವೆ;

೧. ಪ್ರಳಯ ಅನ್ನೋದು ಬೇರೆ ಯಾವುದೂ ಅಲ್ಲ. ಯುದ್ಧವೇ ಒಂದು ಭೀಕರ ಪ್ರಳಯ. ಎಲ್ಲವನ್ನೂ ಸುಟ್ಟುಹಾಕುವ ಬೆಂಕಿ. ಅದೊಂದು ನಂದಿಸಲಾಗದ ಬೆಂಕಿ.

೨. ಯುದ್ಧ ಮುಗ್ಧರನ್ನು, ಅರಳುವ ಪೀಳಿಗೆಯನ್ನು ನಾಶ ಮಾಡುತ್ತದೆ. ಹೀಗೆ ಯುದ್ಧ ಮುಂದುವರಿದರೆ, ಜಗತ್ತು ಒಂದು ದಿನ ಮನುಷ್ಯರೇ ಇಲ್ಲದ ಮರುಭೂಮಿಯಾಗುತ್ತೆ. ಇದು ನಾನು ಕೇಳಿರುವ ಕಾಲಜ್ಞಾನ, ನಾನು ತಿಳಿಯಬೇಕಾಗಿರುವ ಕಾಲಜ್ಞಾನ... ಇದು ಈ ಕಾಲದ ಜ್ಞಾನ, ದಯವಿಟ್ಟು ಕ್ಷಮಿಸಿ. ನನ್ನ ಮಾತು ನಿಮಗೆ ಅಪಥ್ಯ ಆಗಿದ್ದರೆ ಕ್ಷಮಿಸಿ. ಮನುಷ್ಯನ ಬದುಕಿನ ತೊಂಬತ್ತು ಭಾಗ ಯುದ್ಧನೇ ತುಂಬಿಕೊಂಡಿದೆ. ಇನ್ನು ನಾವು ಮನುಷ್ಯರಾರಿಗಿರೋದು ತುಂಬ ದೂರ ಉಳಿಯಿತು. ಎಲ್ಲ ಸುಟ್ಟು ನಾಶವಾಗ್ತಾ ಇರೋವಾಗ ನಮ್ಮ ಅಂತರಂಗದಲ್ಲಾದರೂ ಒಂದು ಗಿಡ ನೆಟ್ಟು ಒಂದು ಹೂವು ಅರಳಿಸೋಣ.

ಈ ಮೇಲಿನ ಮಾತುಗಳನ್ನು ಕನಕನಾಯಕ ತನ್ನ ಪ್ರಜೆಗಳನ್ನು ಉದ್ದೇಶಿಸಿ ಆಡುವುದು. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಮಾತೆಂದರೆ ಕಿ.ರಂ.ನಾಗರಾಜ ಅವರು ಯುದ್ಧವು ಮನುಷ್ಯ ವಿರೋಧಿ–ಜೀವ ವಿರೋಧಿ ಎಂಬ ನಿಲುವನ್ನು ಕನಕನ ಮೂಲಕ ವ್ಯಕ್ತ ಪಡಿಸಿರುವುದು. ಅಣ್ವಸ್ತ್ರ ಹೊಂದಲು ಪ್ರಬಲ ರಾಷ್ಟ್ರಗಳು ಪೈಪೋಟಿ ನಡೆಸುವ ಸಂದರ್ಭದಲ್ಲಿ, ನಾಟಕಕಾರರು ಮುಂದೆ ಯುದ್ಧಗಳು ನಡೆದಲ್ಲಿ ಆಗಬಹುದಾದ ವಿನಾಶವನ್ನು ಇಲ್ಲಿ ಸೂಚಿಸುತ್ತಿದ್ದಾರೆ. ಯುದ್ಧವೇ ಪ್ರಳಯ, ಎಲ್ಲವನ್ನು ಸುಟ್ಟುಹಾಕುವ ಬೆಂಕಿ ಎಂಬ ಮಾತಿನಲ್ಲಿ ಯುದ್ಧದ ಭೀಕರ ಪರಿಣಾಮ ಚಿತ್ರಣವನ್ನು ನಾಟಕಕಾರರು ನೀಡಿದ್ದಾರೆ. ಇದು ಅತ್ಯಂತ ಮುಖ್ಯವಾದ ಸಂದರ್ಭವೆಂಬುದು ಅಧ್ಯಯನಕಾರರಿಗೆ ಹೊಳೆಯುವಂಥದ್ದು. ಅಲ್ಲದೆ "ಇದೇ ನಾನು ಕೇಳಬೇಕಾಗಿರುವ ಕಾಲಜ್ಞಾನ" ಎಂಬ ಅವನ ಮಾತುಗಳು ಕೂಡ ಗಮನಾರ್ಹ. ಇದು ಕನಕನನ್ನು ಕಾಲಜ್ಞಾನಿ ಎಂದು ಕರೆದಿರುವುದಕ್ಕೆ, ನಾಟಕಕ್ಕೆ "ಕಾಲಜ್ಞಾನಿ ಕನಕ" ಎಂದು ಶೀರ್ಷಿಕೆ ನೀಡಿರುವುದಕ್ಕೆ ಸಮರ್ಥನೆಯನ್ನು ಒದಗಿಸುವಂತಿದೆ.

**೨.೨ ಪ್ರಭುತ್ವ ವಿರೋಧಿ ನಿಲುವು:**

ಈ ಸಂದರ್ಭದಲ್ಲಿ ನಾವು ಗಮನಿಸಲೇ ಬೇಕಾದ ಮತ್ತೊಂದು ಮುಖ್ಯ ಸಂಗತಿಯೆಂದರೆ, ಕನಕನ ಪ್ರಭುತ್ವ ವಿರೋಧಿ ನಿಲುವು. ತಾನೊಬ್ಬ ಆಳುವವನಾಗಿದ್ದು, ಪರಾಕ್ರಮಿಯಾಗಿದ್ದು ಕನಕ ಇಲ್ಲಿ ಆಳುವವರ ಆಳ್ವಿಕೆಗುಣವನ್ನು, ಅಧಿಕಾರವನ್ನು ಆ ಮೂಲಕ ಪ್ರಭುತ್ವವನ್ನು ವಿರೋಧಿಸುತ್ತಾನೆ. ಈ ಕೆಲವು ಮಾತುಗಳಿಂದ ಅದಕ್ಕೆ ಸಮರ್ಥನೆಯನ್ನು ಹೊಂದಬಹುದು.

(ಅ) ಈವರೆಗೂ ಅಧಿಕಾರದ ಮದದಿಂದ ನಾನು ಮರೆತಿದ್ದೆ.

(ಆ) ನನ್ನ ತೋಳುಬಲಕ್ಕೆ ನಾನೇ ಧಿಕ್ಕಾರ ಹಾಕಿ ಕೂಗಬೇಕೆನ್ನಿಸುತ್ತದೆ.

(ಇ) ಪರಾಕ್ರಮದ ಬಗ್ಗೆ ನನ್ನಲ್ಲಿ ಅಸಹ್ಯ ಹುಟ್ಟಿದೆ.

(ಈ) ನನ್ನ ಒರೆಯಲ್ಲಿ ಪ್ರೇಮ, ಯುದ್ಧ ಎರಡೂ ಇದ್ದವು. ಆದರೆ, ಪ್ರೇಮವನ್ನು ಮರೆತು ಯುದ್ಧದ ಖಡ್ಗಕ್ಕೆ ಮಾರುಹೋಗಿದ್ದೆ.

(ಉ) ಮನುಷ್ಯನ ಬದುಕಿಗೆ ಪರಾಕ್ರಮದಿಂದ ಆಗಬೇಕಾದದ್ದು ಏನೂ ಇಲ್ಲ. ಯುದ್ಧ ಹಿಂಸೆಗಳಿಲ್ಲದೆ, ಆಯುಧಗಳ ಅಹಂಕಾರವಿಲ್ಲದೆ ಮನುಷ್ಯ ಬದುಕಬಹುದು.

(ಊ) ರಾಜ, ಚಕ್ರವರ್ತಿ ಅಂದ್ರೆ ಅದೊಂದು ಪದವಿ ಅಲ್ಲ. ಅವರು ಪ್ರಜೆಗಳ ಸೇವಕರು ಮಾತ್ರ.

(ಎ) ಯುದ್ಧ ರಾಜರ ಅಹಂಕಾರದ ಚದುರಂಗದ ಆಟ. ಮನುಷ್ಯನು ಆ ಆಟದ ಕಾಯಿಗಳು.

(ಏ) ಜನರನ್ನು ಕಾಯೋ ರಾಜರಿಂದ ಲಾಭ ಆಗೋದು ರಾಜನಿಗೆ. ಯುದ್ಧ ಕೊಲೆ, ಸುಲಿಗೆ ನಡೆಯೋದು ಅವನ ಕಾರಣದಿಂದಲೇ. ಜನರನ್ನು ಕಾಪಾಡ್ತೇವೆ ಅನ್ನೋ ಅಹಂಕಾರದಿಂದ ಬೀಗುವವರಿಂದ ಯಾವ ರಕ್ಷಣೆ ಆಗಿತ್ತೆ? ಪ್ರಜೆಗಳ ಸ್ಥಿತಿ ಹಾಗೇ ಉಳಿಯುತ್ತೆ. ಅಷ್ಟೇ ಯಾಕೆ? ಇನ್ನೂ ಕಡೆಯಾಗುತ್ತೆ.

(ಐ) ನಮ್ಮನ್ನು ಕಾಯುವ ಕುರುಬ ರಾಜ ಅಲ್ಲ.

ಈ ಮೇಲಿನ ಎಲ್ಲ ಮಾತುಗಳಲ್ಲೂ ಕನಕನ ಪ್ರಭುತ್ವ ವಿರೋಧಿ ನಿಲುವು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಪರಾಕ್ರಮ ಮನುಷ್ಯನಿಗೆ ಅಧಿಕಾರವನ್ನು ಕೊಡುತ್ತದೆ. ಅಧಿಕಾರ ಅಹಂಕಾರವನ್ನು ಕೊಡುತ್ತದೆ. ಅಹಂಕಾರ ಶೋಷಣೆಗೆ ಕಾರಣವಾಗುತ್ತದೆ. ಆದ್ದರಿಂದಲೇ ಕನಕ, ಪ್ರಭುತ್ವ ವಿರೋಧಿಯಾಗಿದ್ದಾನೆ. ಅವನ ಈ ಮಾತುಗಳು ಪ್ರಜಾಸತಾತ್ಮಕವಾದ ನಡವಳಿಕೆಯ ಜ್ಞಾನದಿಂದ ಹೊರಹೊಮ್ಮಿರುವುದನ್ನು ಗಮನಿಸಬೇಕು. ಅಲ್ಲದೆ ಕನಕ ತಳಸಮುದಾಯದ ಸಹ ಜೀವಿಗಳ ಬಗ್ಗೆ ಅನುಕಂಪಯುಳ್ಳವನಾಗಿದ್ದಾನೆ. ಮುಗ್ಧರೈತರು, ಕಾಯಕದ ಮಂದಿ, ಮೈ ಮುರಿದು ದುಡಿಯೋ ಜನ, ಇವರೆಲ್ಲರ ಬಗ್ಗೆ ಸಹಾನುಭೂತಿಯುಳ್ಳವನಾದ್ದರಿಂದಲೇ ಇನ್ನಾದರೂ ತಾನು ಸೇವಕರಿಲ್ಲದ ಪ್ರಪಂಚವನ್ನು ಬಯಸಿ ಹೊರಡುತ್ತೇನೆನ್ನುತ್ತಾನೆ. ಚದುರಂಗದಾಟವಾದ ಯುದ್ಧದಲ್ಲಿ ಆಟದ ಕಾಯಿಗಳಾದ ಮನುಷ್ಯರು, ದುಃಖದ ದುರ್ದೆಶೆಯಲ್ಲಿ ಕತ್ತಲೆಯಲ್ಲಿ ಕೂಲಿಗಾರರು ತಮ್ಮ ಮೈಮನಗಳನ್ನು ಮಾರುತ್ತಾ ಇದ್ದಾರೆ. ಅವರ ನೋವು ಗದ್ದುಗೆಯಲ್ಲಿ ಕೂತವರಿಗೆ ತಟ್ಟುವುದೇ ಇಲ್ಲ. ತಟ್ಟಿದರೂ ಗುಹಾಧ್ವನಿಯಂತೆ ಕೇಳುತ್ತದೆಂದು ಆತ ವಿಷಾಧಿಸುತ್ತಾನೆ.

**೨.೩ ಪುರೋಹಿತಶಾಹಿಯ ವಿರುದ್ಧದ ಬಂಡಾಯ:**

ಕನಕನು ತನ್ನ ಪರಾಕ್ರಮ, ಅಧಿಕಾರವನ್ನು ಧಿಕ್ಕರಿಸಿ ಬಾಡ ಗ್ರಾಮವನ್ನು ತೊರೆದು ಕಾಗಿನೆಲೆಗೆ ಬರುತ್ತಾನೆ. ಅಲ್ಲಿ ಅವನು ಸಂಗಡಿಗರೊಂದಿಗೆ ಸರಳವಾದ ಸಹಬಾಳ್ವೆ ನಡೆಸುತ್ತಾ, ಅವರಲ್ಲಿ ಜ್ಞಾನದ ಜ್ಯೋತಿಯನ್ನು ಉರಿಸಲು ಶ್ರಮಿಸುತ್ತಾನೆ. ಕಾಗಿನೆಲೆಯು ಕನಕನ ಆರಾಧ್ಯ ದೇವನಾದ ಕೇಶವನಿರುವ ತಾಣ. ಆದ್ದರಿಂದಲೇ 'ಕಾಗಿನೆಲೆಯ ಆದಿಕೇಶವರಾಯ' ಕನಕನ ಅಂಕಿತನಾಗಿರುವುದು.

ಕಾಗಿನೆಲೆಯಲ್ಲಿ ಕನಕ ಮುಖ್ಯವಾಗಿ ಜನರಲ್ಲಿ ಅರಿವನ್ನು ಮೂಡಿಸುವ ಪ್ರಯತ್ನ ಮಾಡುತ್ತಾನೆ. ಸೃಷ್ಟಿಯ ರಹಸ್ಯ, ಸಾಂಘಿಕ ಜೀವನ, ತಾರತಮ್ಯ, ಜಾತಿ, ಕುಲ, ಮಡಿ, ಮೈಲಿಗೆ ಇವುಗಳ ವಿಚಾರವನ್ನು ಚರ್ಚಿಸಿ ಜನರು ಪುರೋಹಿತ ವರ್ಗದ ಕುತಂತ್ರಕ್ಕೆ ಬಲಿಯಾಗಿ ಅವರ ಅಡಿಯಾಳಗಿರುವುದರ ಬಗ್ಗೆ ಜಾಗೃತಿ ಮೂಡಿಸಲು ಪ್ರಯತ್ನಿಸುತ್ತಾನೆ. ಇದು ಕಾಗಿನೆಲೆಯ ಪುರೋಹಿತರ ಕಣ್ಣು ಕುಕ್ಕಿಸುತ್ತದೆ. ಕನಕ ತನ್ನ ಕಿರ್ತನಗಳನ್ನು ಪುರೋಹಿತಶಾಹಿಯನ್ನು ಲೇವಡಿ ಮಾಡುವುದರ ಮೂಲಕ ಬ್ರಾಹ್ಮಣೇತರರನ್ನು ತಮ್ಮ ವಿರುದ್ಧ ಎತ್ತಿಕಟ್ಟುತ್ತಿದ್ದಾನೆಂದೇ ಭಾವಿಸುತ್ತಾರೆ. ಅಲ್ಲದೆ ಸಂಸ್ಕೃತಿ ಪಾಠಶಾಲೆಯಲ್ಲಿ ಕನಕನ ಜ್ಞಾನ ಪರೀಕ್ಷೆಯಾಗಬೇಕೆಂದು ಪಟ್ಟುಹಿಡಿಯುತ್ತಾರೆ. ಕನಕನಂಥ ಕೆಳವರ್ಗದ ಕವಿಯನ್ನು ಕವಿಯೆಂದು ಒಪ್ಪಿಕೊಳ್ಳಲೂ ಆ ಜನರು ತಯಾರಿಲ್ಲ. ಅವರು ಕನಕ ತನ್ನ ಸುತ್ತ ದನಕಾಯುವವರನ್ನು, ಕುರಿ ಕಾಯುವರನ್ನು ಸೇರಿಸಿಕೊಂಡು ಸಮಾಲೋಚಿಸುವುದನ್ನು ವ್ಯಂಗ್ಯಮಾಡುತ್ತಾರೆ.

ಕನಕ "ಗಹನವಾದ ವಿಚಾರಗಳನ್ನು ತಿಳಿಯೋ ಇಚ್ಚೆ ಎಲ್ಲರಿಗೂ ಇರುತ್ತೆ. ಜ್ಞಾನಶಕ್ತಿಯನ್ನು ಬೆಳೆಸಿಕೊಳ್ಳೋದು ಎಲ್ಲ ಮನುಷ್ಯರ ಪ್ರವೃತ್ತಿ. ನಮ್ಮನ್ನು ನಾವು ತಿಳಿಯೋದೇ ಇಲ್ಲಿ ಮುಖ್ಯ. ಹಾಗೆ ತಿಳಿಯುತ್ತಾ ಸುತ್ತಣ ನಿಜಗಳನ್ನು ತಿಳಿಯೋದು ನಮ್ಮೆಲ್ಲರ ಗುರಿ. ಹಾಗೆ ಆಗಬೇಕು ಅನ್ನೋದೆ ನಮ್ಮೆಲ್ಲರ ಹಂಬಲ." ಎಂದು ವಿವರಿಸಿದರೂ ಆ ಮಾತುಗಳು ಬ್ರಾಹ್ಮಣರ ಕಿವಿದೆರೆಯನ್ನು ತಲುಪುವುದೇ ಇಲ್ಲ. ಅವರು ಪಟ್ಟು ಹಿಡಿದು ಸಂಸ್ಕೃತ ಪಾಠಶಾಲೆಯಲ್ಲಿ ಕನಕನ ಜ್ಞಾನ ಪರೀಕ್ಷೆಯಾಗಲೇಬೇಕೆಂದು ಪಟ್ಟುಹಿಡಿಯುತ್ತಾರೆ. ಕನಕ ಈ ಸಂದರ್ಭದಲ್ಲಿ "ಚರ್ಚೆಯಾದರೂ ಯಾಕೆ ಬೇಕು? ಮಾತನಾಡಿದ ಕೂಡಲೇ ಎಲ್ಲ ಚರ್ಚೆನೂ ಇಲ್ಲವಾಗುತ್ತೆ. ಚರ್ಚೆಯ ಕೊನೆ ಯಾವಾಗಲೂ ವಾದ, ವಿಕಾರಗಳಿಗೆ ದಾರಿಮಾಡಿಕೊಡುತ್ತದೆ ಇತಂಹ ವಿಕಾರ ಜ್ಞಾನದ ದಾರಿಯಲ್ಲಿ ದೊಡ್ಡ ಅಡ್ಡಿವೆಂಬ ವಿವೇಕದ ಮಾತುಗಳನ್ನಾಡುತ್ತಾನೆ. ಇವನ್ನು ಅರ್ಥಮಾಡಿಕೊಳ್ಳದ ಮಂದಮತಿಯ ಜನ ಪುರೋಹಿತರು.

ಅಲ್ಲದೆ ಈ ಚರ್ಚೆಯು ಕನ್ನಡ ಮತ್ತು ಸಂಸ್ಕೃತ ಭಾಷೆಗಳ ಜಗಳವಾಗಿ ಪರಿವರ್ತವಾಗುತ್ತದೆ. ಪುರೋಹಿತರು ಸಂಸ್ಕೃತ ಭಾಷೆಯ ಪರವಾಗಿ ದನಿಯೆತ್ತುತ್ತಾರೆ. ಅವರು ಮಾಘ, ಭಾರವಿ, ಭೋಜನವನ್ನು ಓದಿಕೊಂಡವರು. ಅವರಿಗೆ ಕನಕನ ಕನ್ನಡ ಕಾವ್ಯ ಬೇಕಿಲ್ಲ. ಸಂಸ್ಕೃತ ತಿಳಿಯದ ಜನರೆಲ್ಲಾ ಅಸಂಸ್ಕೃತರೆಂಬುದೇ ಅವರ ಭಾವನೆ. ಕನ್ನಡದ ಜ್ಞಾನ ದೊಡ್ಡದೋ? ಸಂಸ್ಕೃತದ ಜ್ಞಾನ ದೊಡ್ಡದೋ ನೋಡೇ ಬಿಡೋಣ ಎಂದು ಅವರು ಸವಾಲು ಎಸೆಯುತ್ತಾರೆ. ಆದರೆ ಕನಕ "ಭಾಷೆಯ ಜಗಳ ನನಗೆ ಬೇಕಿಲ್ಲ. ನನಗೆ ತಿಳಿಯೋದು ಕನ್ನಡ, ನಾನು ಬರೆಯೋದು, ನಾನು ಯೋಚಿಸೋದು, ನಾನು ಕನಸು ಕಾಣೋದು ಕನ್ನಡದಲ್ಲೇ......" ಎಂದು ಉತ್ತರಿಸುತ್ತಾರೆ. ನಾಟಕಕಾರರ ಮಾತೃಭಾಷಾ ಪರವಾದ ದನಿ ಇಲ್ಲಿ ಕನಕನ ಮೂಲಕ ಮೂಡಿಬಂದಿದೆ. ಮಾತ್ರವಲ್ಲದೆ, ಕೆಳವರ್ಗದ ಪ್ರತಿನಿಧಿಯಾದ ಕನಕ ಮತ್ತು ಮೇಲ್ವರ್ಗದ ಜನರ ನಡುವಿನ ಸಾಂಸ್ಕೃತಿಕ ಸಂಘರ್ಷದ ಸ್ವರೂಪವೂ ಆಗಿದೆ. ಪಂಡಿತರು ಕನಕನು ಕುಳಿತುಕೊಳ್ಳುವ ಕುರಿಕಂಬಳಿಯನ್ನು ಕುರಿತು ಆಡುವ ಮಾತುಗಳಾಗಲೀ, ರಾಗಿ ಅಂಬಲಿಯ ವಿರುದ್ಧ ತೋರುವ ತಾತ್ಸಾರ ಭಾವನೆಯಲ್ಲಾಗಲೀ ನಾಟಕಕಾರರು ಈ ಸಂಘರ್ಷವನ್ನು ಪರಿಣಾಮಕಾರಿಯಾಗಿ ಹಿಡಿದಿಟ್ಟಿರುವರೆನ್ನಬಹುದು.

ಮುಂದಿನ ದೃಶ್ಯದಲ್ಲಿ, ಕನಕನು ಸಂಗಡಿಗರೊಂದಿಗೆ ಹಿರಿಯ ಪಂಡಿತ ಮತ್ತವರ ಶಿಷ್ಯರನ್ನು ಸಂಸ್ಕೃತ ಪಾಠಶಾಲೆಯಲ್ಲಿ ಮುಖಾಮುಖಿಯಾಗುವ ಸಂದರ್ಭದಲ್ಲಿಯೂ ಈ ಸಂಘರ್ಷವು ಮತ್ತಷ್ಟು ತೀವ್ರ ಸ್ವರೂಪದ ತಿರುವನ್ನು ಪಡೆಯುತ್ತದೆ. ಅಲ್ಲಿಯೂ ಕನಕ ತಾನು ತನ್ನ ಕವಿತೆಗಳಲ್ಲಿ ಯಾರನ್ನೂ ನೋಯಿಸುವ ಪ್ರಯತ್ನ ಮಾಡಿರುವುದಿಲ್ಲ. ಬದಲಾಗಿ, ಬ್ರಮ್ಹಜ್ಞಾನ ತಿಳಿಯದೆ ಮಾತನಾಡುವ ಡಾಂಭಿಕರನ್ನು ವಿರೋಧ ಮಾಡಿದ್ದೇನೆ. ನೇಮ ಇಲ್ಲದೆ ಜಪತಪ ಮಾಡುವವರನ್ನು ಕುರಿತು ವ್ಯಂಗ್ಯದ ಮಾತು ಆಡಿದ್ದೇನೆ. ಭಕ್ತಿ ಆಗಲಿ, ನಿಷ್ಠೆಯಾಗಲಿ ಇಲ್ಲದವರನ್ನು ಉದ್ದೇಶಿಸಿ ಆಡಿರುವ ಮಾತುಗಳೆನ್ನುತ್ತಾನೆ.

ಇಲ್ಲಿ ಕನಕ ನಿಜಭಕ್ತರಲ್ಲದವರನ್ನು ವಿಡಂಬಿಸಿರುವ ಪರಿ ಮುಖ್ಯವಾದುದು. ಅಂತರಂಗದಲ್ಲಿ ಭಕ್ತಿಯಿಲ್ಲದೆ ಬಾಹ್ಯಾಡಂಬರಗಳನ್ನು ತೋರುವವರನ್ನು ಲೇವಡಿ ಮಾಡಿದ್ದಾನೆ. ಅವನು ಖಚಿತವಾಗಿ ಪ್ರತಿಪಾದಿಸಿರುವಂತೆ ಅಂತರಂಗದ ಭಕ್ತಿಯೇ ಬಹುಮುಖ್ಯವಾದುದು. ಕನಕನ ಈ ಸಮಾಜ ವಿಡಂಬನೆಯ ಮೇಲೆ ವಚನಕಾರರ ಪ್ರಭಾವವನ್ನು ಗುರುತಿಸುವ ಅಧ್ಯಯನಕ್ಕು ಇಲ್ಲಿ ಅವಕಾಶಗಳಿವೆ. ಆದರೆ ವಚನ ಮತ್ತು ಹರಿದಾಸ ಚಳುವಳಿಗಳ ಮೂಲ

ಉದ್ದೇಶದ ಸ್ವರೂಪವೇ ಸಮಾಜ ನೀತಿಯನ್ನು ಬಿಂಬಿಸುವುದಾಗಿರುವುದರಿಂದ ಕನಕನ ಮಾತುಗಳು ಈ ಉದ್ದೇಶಕ್ಕೆ ಪೂರಕವಾಗಿಯೇ ಇವೆ ಎಂಬ ನಿರ್ಧಾರಕ್ಕೆ ಬರಬಹುದು.

**೨.೪ 'ರಾಮಧಾನ್ಯ ಚರಿತ್ರೆ' ಯೊಂದಿಗಿನ ಅನುಸಂಧಾನ:**

ಕಿ.ರಂ ನಾಗರಾಜ ಅವರು ಕನಕನ ಕೆಲವು ಕೀರ್ತನೆಗಳನ್ನು ಸಾಂದರ್ಭಿಕವಾಗಿ ಬಳಸಿಕೊಂಡಿರುವಂತೆಯೇ ಅವರ ಕಾವ್ಯಗಳಲ್ಲಿ 'ರಾಮಧಾನ್ಯ ಚರಿತ್ರೆ'ಯನ್ನು ಇಡೀ ಒಂದು ದೃಶ್ಯಕ್ಕೆ ಅಳವಡಿಸಿಕೊಂಡಿದ್ದಾರೆ. ಇದು ಅತ್ಯಂತ ಔಚಿತ್ಯ ಪೂರ್ಣಕವಾಗಿಯೂ ಅಡಕಗೊಂಡಿರುವುದು ನಾಟಕಕಾರರ ಪ್ರತಿಭೆಗೆ ಸಾಕ್ಷಿಯಾಗಿದೆ. ರಾಮಧಾನ್ಯ ಚರಿತ್ರೆಯು ಕನಕದಾಸ ಸ್ವೋಪಜ್ಞತೆಗೆ ಹಿಡಿದ ಕನ್ನಡಿಯಾಗಿದೆ. ಮೂಲದ ಕೃತಿಗಳನ್ನು ಇಲ್ಲಿ ತುಲನಾತ್ಮಕವಾಗಿ ಅಭ್ಯಸಿಸಲು ನೆನಪಿಸಿಕೊಳ್ಳಬಹುದಾದರೆ ಅದು ಈ ಕೆಳಗಿನಂತಿದೆ:

"ಭಾಮಿನೀ ಷಟ್ಪದಿಯಲ್ಲಿ ರಚಿತವಾಗಿರುವ "ರಾಮಧಾನ್ಯ ಚರಿತ್ರೆ"ಯು ಸುಮಾರು ನೂರಾಐವತ್ತಾರು ಪದ್ಯಗಳನ್ನು ಒಳಗೊಂಡಿದೆ. ಇಲ್ಲಿ ರಾಗಿಯನ್ನು ರಾಮಧಾನ್ಯವೆಂದು ಕರೆದು ಅದರ ಉತ್ಕೃಷ್ಟತೆಯನ್ನು ಬಹಳ ಚಮತ್ಕಾರವಾಗಿ ನಿರೂಪಿಸಲಾಗಿದೆ. ಇದು ರಾಮಾಯಣದಿಂದ ಆರಿಸಿಕೊಂಡ ವಸ್ತುವಿನಂತೆಯೇ ತೋರಿದರೂ ಇದೊಂದು ಸ್ವತಂತ್ರ ಕಲ್ಪನಾವಸ್ತುವುಳ್ಳ ಕೃತಿ, ರಾಗಿ, ಅಕ್ಕಿಗಳಲ್ಲಿ (ನರೆದಲೆಗ, ವ್ರೀಹಿ) ರಾಗಿಯೇ ಶ್ರೇಷ್ಠ ಎಂದು ಹೇಳುವುದು ಇಲ್ಲಿ ಮುಖ್ಯ ಉದ್ದೇಶ. ಇಂದಿನಂತೆಯೇ ಅಂದಿನ ಸಮಾಜದಲ್ಲಿಯೂ ನೆಲೆಸಿದ್ದ ದೀನಧನಿಕರ ಅಂತರವನ್ನು ಬಹಳ ಅರ್ಥವತ್ತಾಗಿ ಮಾರ್ಮಿಕವಾಗಿ ವ್ಯಂಗ್ಯವಾಗಿ ಎತ್ತಿ ತೋರಿಸಲಾಗಿದೆ. ರಾಗಿ ಮತ್ತು ಅಕ್ಕಿಗಳ ಮಧ್ಯೆ ನಡೆಯುವ ಸಂವಾದ ಶೈಲಿ, ನಿಷ್ಪಕ್ಷಪಾತಿಯಾದ ಶ್ರೀರಾಮನ ವರ್ತನೆ ಮಾನವೀಯದಾಗಿದೆ. ಈ ಕತೆಗೆ ಆಧಾರವೇನೋ ತಿಳಿಯದು. ಬಹುಶಃ ಕವಿ ಆ ಕಾಲದಲ್ಲಿ ಪ್ರಚಲಿತವಿದ್ದ ಜನಪದ ಕಥೆಯೊಂದನ್ನು ಆಧರಿಸಿ ಈ ಕೃತಿಯನ್ನು ಬರೆದಿರಬಹುದು."

ಕಿ.ರಂ. ನಾಗರಾಜ ಅವರು ಮೂಲ ಕೃತಿಯ ಆಶಯಕ್ಕೆ ಭಂಗವಾಗದಂತೆ ದೃಶ್ಯವತ್ತಾಗಿಸಿಕೊಂಡಿದ್ದಾರೆ. ಮೂಲದಲ್ಲಿ ರಾಗಿ–ಅಕ್ಕಿಗಳೇ ತಮ್ಮ ಶ್ರೇಷ್ಠತೆಯ ಬಗ್ಗೆ ವಾದ–ವಿವಾದ ತೊಡಗಿಕೊಳ್ಳುವುದಾದರೆ, ಕಾಲಜ್ಞಾನ ಕನಕದಲ್ಲಿ ಕನಕನ ಸಂಗಡಿಗರು ರಾಗಿಯ ಪರವಾಗಿಯೂ, ಪಂಡಿತರು ಅಕ್ಕಿಯ ಪರವಾಗಿಯೂ ವಾದ ಮಾಡುತ್ತಾರೆ. ಈ ಎರಡು ಧಾನ್ಯಗಳನ್ನು ಬಳಸುವ ವರ್ಗಗಳು ಅವಾಗಿರುವುದನ್ನು ಲಕ್ಷಿಸಿಯೆ ನಾಟಕಕಾರರು ಇಲ್ಲಿ ಪರಿವರ್ತನೆಗೆ ಮುಂದಾಗಿದ್ದಾರೆ.

ರಾಗಿಯನ್ನು ತಿನ್ನುವವರು ರೋಗಿಗಳೆಂದೂ, ಹೊಟ್ಟೆಕೆಟ್ಟವರು ತಿನ್ನುವ ಆಹಾರವೆಂದೂ, ನವಧಾನ್ಯಗಳಲ್ಲಿ ಅಕ್ಕಿಯೇ ಶ್ರೇಷ್ಠವೆಂದು ಪಂಡಿತರು ವಾದಿಸುತ್ತಾರೆ. ದೇವರ ನೈವೇದ್ಯಕ್ಕೆ ಮತ್ತು ಸತ್ತವರಿಗೆ ಪಿಂಡ ಹಾಕಲು ಅಕ್ಕಿಯ ಅನ್ನ ಬೇಕೇಬೇಕು. ತಿಳಿದವರು ಮತ್ತು ರಾಜರೆಲ್ಲ ಅಕ್ಕಿಯನ್ನೇ ಬಳಸುವುದೆಂದು ಪ್ರತಿಪಾದಿಸುತ್ತಾರೆ. ಕನಕನ ಸಂಗಡಿಗರು ರಾಗಿಯ ಪರವಾಗಿ ವಾದಿಸುತ್ತಾ, ರಾಗಿಯನ್ನು ತಿಂದವ ನಿರೋಗಿಯೆಂದೂ, ರಾಗಿಯನ್ನು ಬಳಸುವವರು ಯೋಗಿಗಳು ಎನ್ನುತ್ತಾರೆ. ಅಲ್ಲದೆ ಅಕ್ಕಿಯು ಬಡವರ ಕೈಗೆ ಎಟುಕುವ ವಸ್ತುವಲ್ಲ. ಅದು ಬಡವರನ್ನು ಕಣ್ಣೆತ್ತಿಯೂ ನೋಡದೆಂಬುದು ಅವರ ವಾದ. ಕನಕದಾಸರು ಮೂಲದಲ್ಲಿ ಬಡವರು ಬಳಸುವ ರಾಗಿಯ ಪರವಾಗಿ ಕಾವ್ಯವನ್ನು ರಚಿಸಿದ್ದಾರೆ.

ಅವರ 'ರಾಮಧಾನ್ಯ ಚರಿತ್ರೆ'ಯಲ್ಲಿ ರಾಗಿ ಅಕ್ಕಿಗಳ ಜಗಳ ನಡೆಯವುದು ಶ್ರೀರಾಮನ ರಾಜಸಭೆಯಲ್ಲಿ. ಶ್ರೀರಾಮನು ಅವುಗಳ ವಾದ–ವಿವಾದವನ್ನು ಆಲಿಸಿ, ಎರಡೂ ಧಾನ್ಯಗಳನ್ನು ಸೆರೆಮನೆಯಲ್ಲಿರಿಸಿ, ಆರು ತಿಂಗಳ ನಂತರ ತನ್ನ ತೀರ್ಪನ್ನು ಪ್ರಕಟಿಸುವುದಾಗಿ ಹೇಳುತ್ತಾನೆ. ಅದರಂತೆಯೇ ಆರು ತಿಂಗಳ ಸೆರೆವಾಸದ ನಂತರ ತನ್ನ ಪಟ್ಟಾಭಿಷೇಕ ಮಹೋತ್ಸವದಂದು ಶ್ರೀರಾಮನು ಅಕ್ಕಿ–ರಾಗಿಗಳನ್ನು ಸೆರೆಯಿಂದ ರಾಜಸಭೆಗೆ ಕರೆತರುತ್ತಾನೆ. ರಾಗಿಯು ಸೆರೆವಾಸದಿಂದ ಕಂಗೆಡದೆ ಕಾಂತಿಯುಕ್ತವಾಗಿ ನಳನಳಿಸುತ್ತಿತ್ತು. ಆದರೆ ಅಕ್ಕಿಯು ಮುಗ್ಗುಲು ಹಿಡಿದು ದುರ್ವಾಸನೆ ಬೀರುತ್ತಿತ್ತು. ಅದರ ವಾಸನೆಗೆ ಸಭಿಕರೆಲ್ಲಾ ಮೂಗು ಮುಚ್ಚಿಕೊಂಡರು. ಆಗ ಶ್ರೀರಾಮನು ರಾಗಿಯನ್ನು ಹೊಗಳಿ ಮಾತನಾಡಿದನಲ್ಲದೆ. ನವಧಾನ್ಯಗಳಲ್ಲಿ ರಾಗಿಯೇ ಶ್ರೇಷ್ಠವೆಂದು ಸಾರಿದನು. ರಾಗಿಯು ತನಗೆ ಪ್ರಿಯವಾದುದರಿಂದಲೇ ತನ್ನ ಹೆಸರಿನ 'ರಾಘವ' ಎಂಬುದರ ಸಂಕ್ಷಿಪ್ತ ರೂಪವೇ ರಾಗಿಯಾಯಿತೆಂದು ಕವಿಯು ಸಾರುವುನು. ಮಾತ್ರವಲ್ಲ 'ರಾಗಿ' ಎಂದರೆ ಪ್ರೀತಿಯೆಂಬ ಅರ್ಥವಿರುವುದನ್ನು ಸೂಚಿಸುವನು.

ಈ ಕಥೆಯನ್ನು ಕನಕ ಮತ್ತವನ ಸಂಗಡಿಗರು ಪಂಡಿತರೆದುರು ಪ್ರಸ್ತುತಪಡಿಸುವನು. ಆದರೆ ಅವರ್‍ಯಾರೂ ಈ ಕಥೆಯನ್ನು ಒಪ್ಪಿಕೊಳ್ಳುವುದಿಲ್ಲ. ಬದಲಿಗೆ, ಕನಕ ತನ್ನ ತೇಜೋವಧೆ ಮಾಡಲು ಯಾವುದೋ ಕಟ್ಟುಕತೆಯನ್ನು ಕಟ್ಟಿರುವನೆಂದು ಜರೆಯುವರು. ಕನಕ ಇದರಿಂದ ವಿಚಲಿತನಾಗದೆ "ವಿಚಾರವಂತರು ಒಪ್ಪಿದ್ದು ನಿಮ್ಮ ತಲೆಗೆ ಹೋಗೋದು ಕಷ್ಟವೆ? ತಿಳಿದವರನ್ನು ಒಪ್ಪಿಸಬಹುದು. ಆದರೆ ಅಲ್ಪ ತಿಳಿದವರು ಒಪ್ಪಿಸೋದು ಆ ಬ್ರಹ್ಮನಿಗೂ ಸಾಧ್ಯವಿಲ್ಲ" ಎನ್ನುತ್ತಾನೆ. ಪಂಡಿತರು ಕೋಪಗೊಂಡು ಅಲ್ಲಿಂದ ಹೊರಟು ಹೋಗುತ್ತಾರೆ. ಕಿ.ರಂ ನಾಗರಾಜರು ಪ್ರಸ್ತುತ ದೃಶ್ಯದಲ್ಲಿ ಕೆಳವರ್ಗ ಮತ್ತು ಮೇಲ್ವರ್ಗದವರ ನಡುವಿನ ಸಂಘರ್ಷವನ್ನು ಹಿಡಿಯಲು ಪ್ರಯತ್ನಿಸಿ

ಸಫಲರಾಗಿದ್ದಾರೆ. ರಾಮಧಾನ್ಯ ಚರಿತ್ರೆ ಕಾವ್ಯದ ಅಳವಡಿಕೆ ಔಚಿತ್ಯಪೂರ್ಣವಾಗಿ ಹೊಂದಿಕೊಂಡಿದೆ ಎನ್ನಬಹುದು.

**೨.೫ ಬ್ರಾಹ್ಮಣೇತರ ದೇವಾಲಯ ಪ್ರವೇಶದ ಹೋರಾಟ:**

'ಕಾಲಜ್ಞಾನ ಕನಕ' ನಾಟಕದ ಬಹುಮುಖ್ಯ ವಿಚಾರವುಳ್ಳ ಸಂದರ್ಭವಿದು. ತಲೆತಲಾಂತರದಿಂದ ಪುರೋಹಿತಶಾಹಿಯ ಹಿಡಿತದಲ್ಲಿರುವ ದೇವಾಲಯಕ್ಕೆ ಬ್ರಾಹ್ಮಣೇತರರ ಪ್ರವೇಶದ ವಿಚಾರ ಇಲ್ಲಿ ಚಿತ್ರಣಗೊಂಡಿದೆ. ದೇವಾಲಯವು ಪಂಡಿತರ ಸ್ವತ್ತಾಗಿದ್ದು ಅದು ಅವರ ನಿಯಂತ್ರಣದಲ್ಲಿದೆ. ಶೂದ್ರರಿಗೆ ಅದರೊಳಗೆ ಪ್ರವೇಶವನ್ನು ನಿರಾಕರಿಸಲಾಗಿದೆ. ಅದರ ಆಗ್ರಹಕ್ಕೆ ಕುರಿಗಳಂತೆ ತಲೆಬಾಗಿದ್ದ ಬ್ರಾಹ್ಮಣೇತರರು ಇದೀಗ ಕನಕನ ವೈಚಾರಿಕತೆಯ ಪ್ರಖರವಾದ ಬೆಳಕಿನಲ್ಲಿ ಎಚ್ಚೆತ್ತುಕೊಂಡಿದ್ದಾರೆ. ದೇವಾಲಯವನ್ನು ಪ್ರವೇಶಿಸಲೇಬೇಕೆಂಬ ಛಲ ಅವರಲ್ಲಿ ಮೂಡಿದ ಪರಿಣಾಮ ಅವರೆಲ್ಲ ಕನಕನ ನೇತೃತ್ವದಲ್ಲಿ ದೇವಾಲಯವನ್ನು ಪ್ರವೇಶಿಸುವ ಸಂಕಲ್ಪದೊಂದಿಗೆ ಆದಿಕೇಶವನ ಗುಡಿ ಬಳಿಗೆ ಬರುತ್ತಾರೆ.

ಆದರೆ ಪಂಡಿತರು ಅವರ್ಯಾರಿಗೂ ದೇವಸ್ಥಾನ ಪ್ರವೇಶಕ್ಕೆ ಅವಕಾಶ ಕೊಡುವುದಿಲ್ಲ. ಶೂದ್ರರಿಗೆ ಊರಾಚೆ ಇರುವ ಮಾರಿಮುಸಣಿ ದೇವಾಲಯವಿದೆ, ಅಲ್ಲಿಗೆ ಹೋಗಿ ಇಲ್ಲಿ ಬಂದು ಮೈಲಿಗೆಗೊಳಿಸಬಾರದೆಂದು ಆಗ್ರಹಿಸುತ್ತಾರೆ. ಕಿ.ರಂ. ನಾಗರಾಜರು ಈ ದೃಶ್ಯವನ್ನು ವರ್ತಮಾನದ ಹೊಸ್ತಿಲಲ್ಲಿಟ್ಟು ತೂಗಿದ್ದಾರೆ. ಸಂಗಡಿಗರು ದೇವಸ್ಥಾನ ಪ್ರವೇಶದ ಬಯಕೆ ವ್ಯಕ್ತಪಡಿಸಿದಾಗ ಅವರ ಹಿತಚಿಂತಕನಾಗಿ ಕನಕನೇ ಆ ಹೋರಾಟದ ಮುಂದಾಳತ್ವ ವಹಿಸುವದು ಅತಿ ಮುಖ್ಯ. ದೇವಸ್ಥಾನದ ಪ್ರವೇಶದ ವಿಚಾರವು ಆಧುನಿಕ ಭಾರತದಲ್ಲಿ ಒಂದುಕಾಲಕ್ಕೆ ದೊಡ್ಡ ಚರ್ಚೆಯಾಗಿತ್ತು. ಕನಕ ಹೋರಾಡಿದ, ಬಡಿದಾಡಿದ ಜಾಗಗಳಲ್ಲಿ ಇಂದಿಗೂ ಇದರ ವಿಚಾರ ಚರ್ಚೆಯಾಗುತ್ತಲಿದೆ. ಕಿ.ರಂ. ನಾಗರಾಜ ಅವರು ಇದನ್ನು ಕನಕನ ಮೂಲ ದೇವಾಲಯದ ಮತ್ತು ಅದರ ಒಳಗಡೆ ಅಡಗಿರುವ ದೈವದ ಬಗ್ಗೆ ತಮ್ಮದೇ ಆದ ಅನುಭಾವಿಕ ವ್ಯಾಖ್ಯಾನಗಳನ್ನು ರೂಪಿಸಿದ್ದಾರೆ. ಪಂಡಿತರ ಮತ್ತು ಕನಕ ಹಾಗೂ ಅವನ ಸಂಗಡಿಗರ ನಡುವೆ ನಡೆದ ಸಂವಾದದ ಕೆಲವು ತುಣುಕುಗಳನ್ನು ಇಲ್ಲಿ ಉದ್ಧರಿಸಬಹುದು:

**ಪಂಡಿತ** ೩: ನಿನ್ನೆ ಪಾಠಶಾಲೆಯಲ್ಲಿ ಅಪವಿತ್ರ ಮಾಡಿದ್ದಾಯಿತು. ಈಗ ನಮ್ಮ ದೇವಸ್ಥಾನದ ಮೇಲೆ ನೀನೂ, ನಿನ್ನ ಗುಂಪು ಹರಿಹಾಯ್ತೀರಾ?

**ಕನಕ** : ಆ ಯಾವ ಇಚ್ಛೆಯೂ ನನಗಿಲ್ಲ. ದೇವಸ್ಥಾದಲ್ಲಿ ದೇವರಿದ್ದಾರೆ ಅಂತ ನಾನು ತಿಳಿದಿಲ್ಲ. ಬಹಿರಂಗದ ಜಂಜಾಟಕ್ಕೆ ಸಿಲುಕಿದ ಜನ ತಮ್ಮ ಮನಸ್ಸಿನ ನೆಮ್ಮದಿಗೆ ದೇವಸ್ಥಾನಕ್ಕೆ ಬರ್ತಾರೆ ಅನ್ನೋದನ್ನ ಕೇಳಿದ್ದೇವೆ. ಅವರಿಗೆ ದೇವಾಲಯ ಮುಕ್ತವಾಗಬೇಕು. ದೇವಾಲಯ ಎಲ್ಲರಿಗೂ ಸೇರಿದ್ದು. ಆದರೆ ಯಾರದೇ ಯಜಮಾನಿಕೆ ಇರಕೂಡದು.

**ಕನಕನ ಸಂಗಡಿಗ** : (ಒಟ್ಟಾಗಿ) ದೇವರ ಮೇಲೆ, ದೇವಸ್ಥಾನದ ಮೇಲೆ ಯಜಮಾನಿಕೆ ನಡೆಸೋ ಜನರಿಂದ ನಮಗೆ ಬಿಡುಗಡೆಬೇಕು. ಇಲ್ಲಿ ಕನಕನ ಮೂಲಕ ನಾಟಕಕಾರರು ಆಡಿರುವ ಮಾತುಗಳನ್ನು ಗಮನಿಸಿ: ದೇವಾಲಯದಲ್ಲೇ ದೇವರು ಇರುತ್ತಾನೆಂಬ ಸ್ತಾವರ ಸ್ಥಿತಿಯನ್ನು ಕನಕ ಒಪ್ಪುವುದಿಲ್ಲ. ಆದರೆ ನೆಮ್ಮದಿಗಾಗಿ ಜನ ಪ್ರಾರ್ಥಿಸಲು ದೇವಾಲಯಕ್ಕೆ ಬರುತ್ತಾರೆ. ಅವರಿಗೆ ಅಲ್ಲಿ ಮುಕ್ತ ಪ್ರವೇಶ ಅತ್ಯಗತ್ಯ. ದೇವರಮನೆ, ದೇವಾಲಯದ ಮೇಲೆ ಯಜಮಾನಿಕೆ ನಡೆಸುವುದರಿಂದ ಜನರಿಗೆ ಬಿಡುಗಡೆ ಬೇಕು ಎಂಬ ಮನವಿಯನ್ನು ಕನಕ ಇಲ್ಲಿ ಮೊಳಗಿಸುತ್ತಾನೆ. ಆಧ್ಯಾತ್ಮಿಕ ದಾಸ್ಯವನ್ನು ನಾಟಕಕಾರರು ಬೆರಳು ಮಾಡಿತೋರಿಸಿ, ಅದರಿಂದ ಮುಕ್ತಿಯನ್ನು ಬಯಸುತ್ತಿದ್ದಾರೆ. ಸಾಮಾನ್ಯರು ಆಧ್ಯಾತ್ಮ ಮತ್ತು ದೈವ ಬಲದ ಮೂಲಕ ಹೊಂದಿರುವ ಆತ್ಮಸ್ಥೈರ್ಯ ಮತ್ತು ಮನೋಬಲಗಳಿಗೆ ಇಲ್ಲಿ ಒತ್ತು ನೀಡಲಾಗಿದೆ. ಇದೂಕೂಡ ನಾಟಕಕಾರರ ಪ್ರಗತಿಪರ ಚಿಂತನೆಯ ಕುರುಹಾಗಿದೆ ಎನ್ನಬಹುದು. ಈ ಸಂದರ್ಭವನ್ನು ಇನ್ನಷ್ಟು ವಿವರವಾಗಿ ಪರಿಶೀಲಿಸಬಹುದು.

**ಪಂಡಿತ ೪** : ನಿಮಗೆ ದೇವಸ್ಥಾನ ಬೇಕಾದರೆ ಬೇರೆ ಕಟ್ಟಿಕೊಳ್ಳಿ. ಅಲ್ಲಿಗೆ ನಾವು ಕಾಲಿಡೊಲ್ಲ.

**ಕನಕನ ಸಂಗಡಿಗ ೧** : ಈ ದೇವಸ್ಥಾನ ಕಟ್ಟಿರೋದು ನಾವು. ಅದಕ್ಕೆ ಕಾರಣ ಆದೋರು ನಮ್ಮ ಪ್ರಭುಗಳು.

**ಪಂಡಿತ ೨** : ಕಟ್ಟಿರೋದು ನೀವಾದರೆ, ಕಾರಣ ಆದೋರು ಇವರಾದರೆ, ಪವಿತ್ರ ಮಾಡಿ ಪರಿಶುದ್ಧ ಮಾಡಿ ಪೂಜೆ ಮಾಡ್ತಿರೋದು ನಾವು.

**ಕನಕ** : ಅದೆಲ್ಲ ಹಳೆಯ ಮಾತು. ಅದು ಈಗ ಬೇಕಿಲ್ಲ. ದೇವಾಲಯವನ್ನು ಈಗ ಕಟ್ಟಬೇಕಾಗಿಲ್ಲ. ದಿನಾ ದೇವಸ್ಥಾನಗಳನ್ನು ಕಟ್ಟುತ್ತಾ ಹೋದರೆ ಅದಕ್ಕೆ ಕೊನೆ ಎಲ್ಲಿ? ಅದರಿಂದ ಯಾವ ಪ್ರಯೋಜನವೂ ಇಲ್ಲ. ಧರ್ಮ, ಜಾತಿ, ಕುಲಗಳನ್ನು ಮೀರಿದ್ದು ದೇವಸ್ಥಾನ. ದೇವಸ್ಥಾನದ ಮೇಲೆ ಯಾರ ಅಧಿಕಾರವೂ ಇರಕೂಡದು.

ಕನಕ ಮತ್ತವನ ಸಂಗಡಿಗರು ಪಂಡಿತರ ಬಲವಾದ ವಿರೋಧದ ನಡುವೆಯೂ ದೇವಾಲಯ ಪ್ರವೇಶಿಸುತ್ತಾರೆ. ಕೋಪಗೊಂಡ ಪಂಡಿತರು ಕನಕನನ್ನು ಒಡಿದು ಥಳಿಸುತ್ತಾರೆ. ಪರಿಸ್ಥಿತಿಯಿಂದ ನೊಂದ ಕನಕನು ಕಾಗಿನೆಲೆಯಿಂದ ನಿರ್ಗಮಿಸುವ ಪರಿಸ್ಥಿತಿ ಎದುರಾಗುತ್ತದೆ. ಕನಕನ ವರ್ತನೆಯನ್ನು ಇನ್ನಷ್ಟು ಒರೆಗೆ ಹಚ್ಚಿ ನೋಡಬಹುದಾದರೆ ಈ ಸಂದರ್ಭವನ್ನು ಓಗೆ ಗ್ರಹಿಸಬಹುದು: ಎಲ್ಲಿಯವರೆಗೆ ಲೋಕದಲ್ಲಿ ಜಾತಿ-ಜಾತಿಗಳ ನಡುವೆ ಸಾಮರಸ್ಯವಿರುವುದಿಲ್ಲವೋ ಅಲ್ಲಿಯವರೆಗೆ ಶಾಂತಿ ಇರದು: ಕುಲಕುಲವೆಂದು ಹೊಡೆದಾಡುವುದರಲ್ಲಿ ಅರ್ಥವಿಲ್ಲ. ಮನುಷ್ಯರೆಲ್ಲ ಒಂದೇ ಕುಲಕ್ಕೆ ಸೇರಿದವರೆಂದು ಎಲ್ಲರೂ ಗ್ರಹಿಸಬೇಕು. ಆತ್ಮ ಯಾವ ಕುಲ? ಜೀವ ಯಾವ ಕುಲ? ಎಂಬ ಪ್ರಶ್ನೆಗೆ ಸರಿಯಾದ ಉತ್ತರವಿಲ್ಲದರು. ಕನಕದಾಸರ ಮಾತು, ತರ್ಕ, ಬೇಡಿಕೆಗಳಿಗೆ ಪಂಡಿತರು ಸಕಾರಾತ್ಮಕ ಉತ್ತರ ಕೊಡದೆ ಇದ್ದುದರಿಂದ ಕನಕದಾಸರು ತಮ್ಮ ಸಂಗಡಿಗರಿಗೆ ದೇವಾಲಯದೊಳಗೆ ನುಗ್ಗಲು ಅಪ್ಪಣೆ ಮಾಡಿರುವರು. ಕನಕರಿಗೂ ಅವರ ಸಂಗಡಿಗರಿಗೂ ಜಯ ದೊರಕುವುದು. ಪಂಡಿತರು ಕೈ ಕೈ ಹಿಸುಕಿಕೊಳ್ಳುವಂತಾಯಿತು. ಒಂದೆಡೆ ಜನರು ದೇವಾಲಯದಲ್ಲಿ ದೇವರಿದ್ದಾನೆಂದುಕೊಂಡು ಅಲ್ಲಿಗೆ ಹೋಗುವ ಆಸೆಯನ್ನು ಹೊಂದಿರುವರಾದರೆ, ಮತ್ತೊಂದೆಡೆ ದೇವಾಲಯದ ಮೇಲೆ ಹಿಡಿತ ಸ್ಥಾಪಿಸಿಕೊಂಡಿರುವವರು ತಾವು ಮಾತ್ರ ಹೆಚ್ಚೆಂದು ಭಾವಿಸಿ ಇತರರನ್ನು ಕಡೆಗಣಿಸುತ್ತಿದ್ದಾರೆ. ಎಲ್ಲರೂ ಯಾವುದೋ ಒಂದು ಬಗೆಯ ಮಾಯೆಗೊಳಗಾಗಿದ್ದಾರೆ. ಈ ಪ್ರಪಂಚದ ವಿಚಾರ ನಿಗೂಢವಾಗಿದೆ, ಬಯಲು ಆಲಯದೊಳಗಿದೆಯೋ, ಆಲಯವು ಬಯಲೊಳಗಿದೆಯೋ ಅರಿಯದಾಗಿದೆ. ಸಕ್ಕರೆ ಸವಿಯೊಳಗಿದೆಯೋ? ಸವಿಯು ಸಕ್ಕರೆಯೊಳಗಿದೆಯೋ ಅರಿಯದಾಗಿದೆ ಎಂದು ಕನಕದಾಸರು ಪ್ರತಿಕ್ರಿಯಿಸಿದ್ದಾರೆ.

**೨.೬ : ಕನಕದಾಸರ ಎರಡು ಕೀರ್ತನೆಗಳು ಒಳಗೊಂಡಿರುವ ಬಗ್ಗೆ:**

ನಾಟಕಕಾರರು ಕನಕದಾಸರು ರಚಿಸಿರುವ ಹಲವಾರು ಕೀರ್ತನೆಗಳನ್ನು ಸಾಂದರ್ಭಿಕವಾಗಿ ಉಲ್ಲೇಖ ಮಾಡಿರುವರಾದರೂ ಎರಡು ಕೀರ್ತನೆಗಳನ್ನು ವಿಶೇಷವಾಗಿ ಬಳಸಿಕೊಂಡಿರುವುದು ಗಮನಾರ್ಹವಾದುದಾಗಿದೆ. ಮೊದಲನೆಯದು ದೃಶ್ಯ ಐದರ ಅಂತ್ಯದಲ್ಲಿ ಬಳಕೆಯಾಗಿರುವ ಕೀರ್ತನೆ:

ನೀ ಮಾಯೆಯೊಳಗೋ ನಿನ್ನೊಳು ಮಾಯೆಯೋ
ಬಯಲು ಆಲಯದೊಳಗೋ ಆಲಯದೊಳಗೆ ಬಯಲೋ
ಬಯಲು ಆಲಯವೆರಡು ನಯನದೊಳಗೊ

ನಯನ ಬುದ್ಧಿಯ ಒಳಗೊ ಬುದ್ಧಿ ನಯನದೊಳಗೊ
ನಯನ ಬುದ್ಧಿಗಳೆರಡು ನಿನ್ನೊಳಗೋ ಹರಿಯೆ
ಸವಿಯು ಸಕ್ಕರೆಯೊಳಗೊ ಸಕ್ಕರೆಯು ಸವಿಯೊಳಗೊ
ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೊ
ಜಿಹ್ವೆ ಬುದ್ಧಿಯ ಒಳಗೊ ಬುದ್ಧಿ ಜಿಹ್ವೆಯ ಒಳಗೊ

ಬುದ್ಧಿ ಜಿಹ್ವೆಗಳೆರಡು ನಿನ್ನೊಳಗೊ ಹರಿಯೆ
ಕುಸುಮದೊಳು ಗಂಧವೊ ಗಂಧದೊಳು ಕುಸುಮವೋ
ಕುಸುಮ ಗಂಧಗಳೆರಡೂ ಘ್ರಾಣದೊಳಗೊ

ಅಸಮಭವ ಕಾಗಿನೆಲೆಯಾದಿ ಕೇಶವರಾಯ
ಉಸುರೆನ್ನಳವಲ್ಲಿ ಎಲ್ಲ ನಿನ್ನೊಳಗೊ

ಈ ತಿಳಿವಳಿಕೆಯಲ್ಲಿ ಪೂರ್ಣತ್ವದ ಪರಮಾವಧಿ ಇದೆ. ಇಲ್ಲಿ ಭಕ್ತರ ಸಂಶಯವೆಲ್ಲವೂ ನಿವಾರಣೆಗೊಳ್ಳುತ್ತದೆ. ಮಾತು ಅಮೂರ್ತಗಳ ಸಾಂಗತ್ಯವನ್ನು ಕವಿ ಬಯಲು-ಆಲಯ, ನಯನ-ಬುದ್ಧಿ, ಸವಿ-ಸಕ್ಕರೆ, ಜಿಹ್ವೆ-ಬುದ್ಧಿ, ಕುಸುಮ ಗಂಧ-ಘ್ರಾಣದೊಳಗಿನ ಬರೆಯುವಿಕೆಯಲ್ಲಿ ಶ್ರುತಪಡಿಸಿದ್ದಾರೆ. ಈ ಚರಾಚರಗಳೆಲ್ಲವೂ ಭಗವಂತನ ಲೀಲೆಯಾಗಿರುವುದನ್ನು ಪ್ರಸ್ತುತ ಕೀರ್ತನೆಯಲ್ಲಿ ಸೂಚಿಸಿವೆ. ಕಣ್ಣಿಗೆ ಕಾಣುವ, ಅನುಭವ ಗೋಚರವಾಗುವ ಬಗೆಯೂ ಅನುಭಾವ ಪರಿಧಿಯಲ್ಲಿ ಮೇಳೈಸುವುದನ್ನು ಕವಿ ವಿವರಸಿದ್ದಾರೆ.

ಅವರ ಮತ್ತೊಂದು ಕೀರ್ತನೆ ಅಂಕ: ೩ ರ ದೃಶ್ಯ-೧ರಲ್ಲಿ ಬರುತ್ತದೆ. ವಿವಿಧ ವೇಷಧಾರಿಯಾದ ಸಂಗಡಿಗರು ಕನಕನೊಂದಿಗೆ ವಾದ್ಯಗಳನ್ನು ನುಡಿಸುತ್ತಾ ಹಾಡುತ್ತಾ ಕುಣಿಯುತ್ತಾ ಬರುವಾಗ ಕವಿತೆಯನ್ನು ನಾಟಕಕಾರರು ಬಳಸಿಕೊಂಡಿದ್ದಾರೆ. ಇದು ಅತ್ಯಂತ ಜನಪ್ರಿಯ ಕವಿತೆಯೂ ಆಗಿದೆ.

ಎಲ್ಲಾರೂ ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ
ನೆಲ್ಲುಗಳ ಹೊತ್ತುಕೊಂಡು ಬಿದುರುಗಳ ಹೊತ್ತುಕೊಂಡು
ಕೂಲಿಗಳ ಮಾಡುವುದು ಹೊಟ್ಟೆಗಾಗಿ-ಗೇಣು ಬಟ್ಟೆಗಾಗಿ

ನಾಲಕು ವೇದ ಪುರಾಣ ಶಾಸ್ತ್ರ ಪಂಚಾಂಗ ಹೇಳಿಕೊಂಡು
ಕಾಲ ಕಳೆಯುವುದೆಲ್ಲ ಹೊಟ್ಟೆಗಾಗಿ-ಗೇಣು ಬಟ್ಟೆಗಾಗಿ

ಚಂಡಭಟರೆಲ್ಲ ಮುಂದೆ ಕತ್ತಿ ಹಲಿಗೆಯ ಹಿಡಿದು
ಖಂಡ-ತುಂಡ ಮಾಡುವುದು ಹೊಟ್ಟೆಗಾಗಿ-ಗೇಣು ಬಟ್ಟೆಗಾಗಿ

ದೊಡ್ಡ ದೊಡ್ಡ ಕುದುರೆಯನೇರಿ ನೇಜೆ ಹೊತ್ತು ರಾಹುತನಾಗಿ
ಹೊಡೆದಾಡಿ ಸಾಯುವುದು ಹೊಟ್ಟೆಗಾಗಿ -ಗೇಣು ಬಟ್ಟೆಗಾಗಿ

ಕುಂಟೆಕೂರಿಗೆಯಿಂದ ಹೆಂಟೆ ಮಣ್ಣ ಹದಮಾಡಿ
ರೆಂಟೆ ಹೊಡೆದು ಬೆಳೆಸುವುದು ಹೊಟ್ಟೆಗಾಗಿ-ಬಟ್ಟೆಗಾಗಿ

ಕೆಟ್ಟತನದಿಂದ ಕಳ್ಳತನವನ್ನೇ ಮಾಡಿ
ಕಟ್ಟಿ ಹೊಡಿಸಿಕೊಂಬುವುದು ಹೊಟ್ಟೆಗಾಗಿ-ಗೇಣು ಬಟ್ಟೆಗಾಗಿ
ಸನ್ಯಾಸಿ ಜಂಗಜೋಗಿ ಜಟ್ಟಿ ಮಾಂಡ ಬೈರಾಗಿ
ನಾನಾ ವೇಷ ಕೊಂಬುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ

ಉನ್ನತ ಕಾಗಿನೆಲೆ ಆದಿಕೇಶವನ
ಅನುದಿನ ನೆನಯುವುದು ಭಕ್ತಿಗಾಗಿ-ಪರಮುಕ್ತಿಗಾಗಿ

ತಾಳ ದಂಡಿಗೆ, ಶ್ರುತಿ ಮೇಳ ತಂಬೂರಿಯ ಹಿಡಿದುಕೊಂಡು
ಸೂಳೆಯಂತೆ ಕುಣಿಯುವುದು ಹೊಟ್ಟೆಗಾಗಿ-ಗೇಣು ಬಟ್ಟೆಗಾಗಿ
ಎಲ್ಲಾರೂ ಮಾಡುವುದು ಹೊಟ್ಟೆಗಾಗಿ
ಗೇಣು ಬಟ್ಟೆಗಾಗಿ-ತುತ್ತು ಹಿಟ್ಟಿಗಾಗಿ

ಅತ್ಯಂತ ಜನಪ್ರಿಯವಾದ ಈ ಕೀರ್ತನೆಯು ಜನಪದ ಶೈಲಿಯಲ್ಲಿದ್ದು, ಬಳಕೆಯಾಗುವ ಭಾಷೆಯು ಜನರಾಡುವ ಭಾಷೆಗೆ ತೀರಾ ಸಮೀಪವಿದೆ. ಮನುಷ್ಯ ದೇವರ ಧ್ಯಾನಕ್ಕೆ ಸ್ವಲ್ಪವೂ ಸಮಯ ಕೊಡದೆ ಕೇವಲ ಹೊಟ್ಟೆ ತುಂಬಿಸಲು ಶ್ರಮಪಡುವುದನ್ನು ಕವಿ ಕನಕದಾಸರು ಇಲ್ಲಿ ವಿಡಂಬಿಸಿದ್ದಾರೆ.

ಮನುಷ್ಯ ಹೊಟ್ಟೆ ಪಾಡಿಗೆ ಯಾವ ಯಾವ ಕೆಲಸವನ್ನು ಮಾಡುತ್ತಾನೆಂಬುದರ ವಿವರವನ್ನು ಇಲ್ಲಿ ಕಾಣಬಹುದು. ವೇದಗಳನ್ನು ಓದಿದವರು ಪಂಚಾಂಗ ಹಿಡಿದು ಜ್ಯೋತಿಷ್ಯ ಹೇಳುತ್ತಾರೆ. ಸೈನಿಕರು ಕೈಯಲ್ಲಿ ಆಯುಧಗಳನ್ನಿಡಿದುಕೊಂಡು ಯುದ್ಧ ಮಾಡುತ್ತಾರೆ. ವೈಶ್ಯರು ವ್ಯಾಪಾರ ಮಾಡಿದರೆ, ರೈತರು ಹೊಲಗದ್ದೆಗಳಲ್ಲಿ ಮೈಮುರಿದು ದುಡಿಯುತ್ತಾರೆ. ಕಳ್ಳರು ದರೋಡೆ ಮಾಡಿದರೆ, ಕೂಲಿಯವರು ಕೆಲಸ ಮಾಡುತ್ತಾರೆ. ಇನ್ನೂ ಕೆಲವರು ಸನ್ಯಾಸಿ, ಜಂಗಮ, ಜೋಗಿ, ಜಟ್ಟಿ, ಬೈರಾಗಿ ಮುಂತಾದ ನಾನಾ ವೇಷಗಳನ್ನು ಧರಿಸಿ ಹೊಟ್ಟೆ ಹೊರೆಯುತ್ತಾರೆ. ಏನೆಲ್ಲಾ ಕೆಲಸವನ್ನು ಕೇವಲ ಹೊಟ್ಟೆ-ಬಟ್ಟೆ ತುಂಬಿಸಿಕೊಳ್ಳಲು ಸಲುವಾಗಿ ಮಾಡುತ್ತಾರೆ. ಆದರೆ ಯಾರೂ ದೇವರ ಧ್ಯಾನಕ್ಕಾಗಿ ಸಮಯವನ್ನೇ ಮೀಸಲಿಡಿರುವುದಿಲ್ಲ. ಕೇವಲ ತಿಂದು ಬದುಕಿದರೆ ಸಾಲದು, ಅಧ್ಯಾತ್ಮ ಮಾರ್ಗದಲ್ಲಿ ನಡೆಯುವುದೂ ಮುಖ್ಯವೇ. ಆದ್ದರಿಂದ ಕವಿಯು ಮುಕ್ತಿ ಮತ್ತು ಆನಂದಕ್ಕಾಗಿ ದೇವರ ಧ್ಯಾನವನ್ನು ಮನಮುಟ್ಟಿ ಮಾಡಬೇಕೆಂದು ಸಲಹೆ ಮಾಡಿದ್ದಾರೆ. ಕನಕದಾಸರ ಸಾಮಾಜಿಕ ಕಳಕಳಿಯನ್ನು ಬಿಂಬಿಸುವ ಈ ಕವಿತೆಯನ್ನು ಕಿ.ರಂ ಅವರು ಅರ್ಥಪೂರ್ಣವಾಗಿ ಬಳಸಿಕೊಂಡಿದ್ದಾರೆ. ಕನಕ ತನ್ನ ಸಂಗಡಿಗರಿಂದ ಬೀಳ್ಕೊಂಡು ಉಡುಪಿಗೆ ತೆರಳುವಾಗ ನಡೆಸುವ ಸಂಭಾಷಣೆಯ ಸಂದರ್ಭದಲ್ಲಿ ಈ ಕೀರ್ತನೆಯು ಬಳಕೆಗೊಂಡಿದೆ.

ಇಲ್ಲಿ ಗಮನಿಸಬಹುದಾದ (ಅಂಕ:೩, ದೃಶ್ಯ-೨) ಮತ್ತೊಂದು ಮುಖ್ಯವಾದ ಸಂಗತಿಯೆಂದರೆ ಕನಕ ನತ್ವದ ಬಗ್ಗೆ ಹೇಳುವ ಮಾತುಗಳು. ಆ ಸಂಭಾಷಣೆಯ ಉಲ್ಲೇಖದೊಂದಿಗೆ ಇದನ್ನು ಗ್ರಹಿಸಬಹುದು.

| | | |
|---|---|---|
| **ಕನಕ ಸಂಗಡಿಗ ೪** | : | ನಿನ್ನೆ ನಾನು ಅವರನ್ನು (ಕನಕನನ್ನು) ಒಂದು ಪ್ರಶ್ನೆ ಕೇಳಿದೆ. |
| **ಕನಕನ ಸಂಗಡಿಗ ೧** | : | ಏನು ಆ ಪ್ರಶ್ನೆ? |
| **ಕನಕನ ಸಂಗಡಿಗ ೪** | : | ಏನು? ನೀವು ವೈಕುಂಠಕ್ಕೆ ಹೋಗ್ತೀರಂತೆ, ನಿಜವೇ ಅಂದೆ. ಅದಕ್ಕೆ ಅವರು ನಾನು ಹೋದರೆ ಹೋಗ್ತೀನಿ ಅಂದರು. |
| **ಕನಕನ ಸಂಗಡಿಗ ೧** | : | ಅವರು ಹೋದರೆ ಹೋಗಬಹುದು. |
| **ಕನಕನ ಸಂಗಡಿಗ ೨** | : | ಹಾಗಾದರೆ ನಮ್ಮನ್ನೆಲ್ಲಾ ಬಿಟ್ಟು ಅವರೊಬ್ಬರೆ ಹೋಗ್ತಾರೆ ಅನ್ನು (ಕನಕನ ಪ್ರವೇಶ). |
| **ಕನಕ** | : | ನಾನು 'ನಾನು' ಹೋದರೆ ಹೋಗಬಹುದು. ಅಂದರೆ, 'ನಾನು' ಅನ್ನುವುದು ಹೋದರೆ ನಾವೆಲ್ಲಾ ವೈಕುಂಠಕ್ಕೆ ಹೋಗಬಹುದು. |

ಇಲ್ಲಿ ಕನಕನು ಮನುಷ್ಯನ 'ನನತ್ವ'ವೆಂಬ ಅಹಂಕಾರ ಅಳಿದರೆ ಮಾತ್ರವೇ ಮುಕ್ತಿ ಸಾಧ್ಯವೆಂಬುದನ್ನು ಒತ್ತಿ ಹೇಳಿದ್ದಾನೆ. ನಾನು ಎಂಬ ಮದ ತಲೆಗೇರಿದವರಿಗೆ ಈ ನರಕದಿಂದ ಬಿಡುಗಡೆಯಿಲ್ಲ. ನಾನತ್ವ ಅಳಿದಾಗ ಮಾತ್ರ ಅವನು ದೇವರ ಸಾಮಿಪ್ಯವನ್ನು ಹೊಂದಬಲ್ಲ. ಆದ್ದರಿಂದ ನಾನತ್ವ ಬಿಟ್ಟು ಬದುಕುವುದು ಮುಖ್ಯವೆಂಬ ಧೋರಣೆ ಇಲ್ಲಿ ವ್ಯಕ್ತವಾಗಿದೆ. ಕಿ.ರಂ ಅವರು ಕನಕನ ಈ ಸಂದರ್ಭವನ್ನು ತಾತ್ತ್ವಿಕ ಧೋರಣೆಯಾಗಿ ಗ್ರಹಿಸಿರುವ ಕ್ರಮ ಮುಖ್ಯವಾದುದು.

**೨.೭ ಉಡುಪಿಯ ಪುರೋಹಿತರು ಮತ್ತು ಕನಕ :**

ಕಾಗಿನೆಲೆಯ ಪುರೋಹಿತರೊಂದಿಗೆ ಸಂಘರ್ಷದ ನಂತರ ಅಲ್ಲಿಂದ ಹೊರಟ ಕನಕ ಊರೂರು ಅಲೆಯುತ್ತಾ ಉಡುಪಿಗೆ ಬರುತ್ತಾರೆ. ದಾರಿಯುದ್ದಕ್ಕೂ ಅಧ್ಯಾತ್ಮಿಕ ವಿಚಾರಗಳನ್ನು ಜನರಲ್ಲಿ ಬಿತ್ತರಿಸುತ್ತಾ ದಾಸಪಂಥದ ನಿಜವಾದ ಪ್ರತಿನಿಧಿಯೆನಿಸಿದ್ದರು. ಆ ಕಾಲದಲ್ಲಿ ಸಂಸ್ಕೃತ ಪಂಡಿತರ ವ್ಯಾಸಕೂಟ, ಕನ್ನಡ ಹರಿದಾಸರ ನಡುವಿನ ದಾಸಕೂಟಗಳೆಂಬ ಪಂಥದ ಅಂತರ ಮೂಡಿತ್ತು. ಇಲ್ಲಿಯೂ ಕನ್ನಡ-ಸಂಸ್ಕೃತಗಳ ಭಾಷಾ ಸಂಘರ್ಷವನ್ನು ವಿದ್ವಾಂಸರು ಮುನ್ನೆಲೆಗೆ ತಂದಿದ್ದರು. ಇದು ಯಥಾಪ್ರಕಾರ ಮೇಲ್ವರ್ಗದವರ ಮತ್ತು ಕೆಳವರ್ಗದವರ ನಡುವಿನ ಸಾಂಸ್ಕೃತಿಕ ಸಂಘರ್ಷವನ್ನೇ ಒಳಗೊಂಡುದಾಗಿದೆ. ಕನಕದಾಸರು ಉಡುಪಿಯಲ್ಲಿಯೂ ಬ್ರಾಹ್ಮಣರ ವಿರೋಧವನ್ನು ಎದುರಿಸಬೇಕಾಯಿತು.

ಮಠಾಧಿಪತಿಗಳಾದ ವ್ಯಾಸರಾಯರು ಸ್ವತಃ ಸಂಸ್ಕೃತದಲ್ಲಿ ವಿದ್ವಾಂಸರು ಮತ್ತು ಕೃತಿ ರಚನಾಕಾರರು. ಅವರಿಗೆ ವ್ಯಾಸಕೂಟ ಮತ್ತು ದಾಸಕೂಟಗಳೆಂಬ ಭೇದಗಳಲ್ಲಿ ಆಸಕ್ತಿಯಿರಲಿಲ್ಲ. ಕನಕದಾಸರು ಉಡುಪಿಗೆ ಆಗಮಿಸಿರುವ ಸುದ್ದಿ ಅವರಿಗೆ ತಿಳಿದು. ಆತನ ಆಗಮನದಿಂದ ಸಂತಸವನ್ನೇ ಹೊಂದಿರುತ್ತಾರೆ. ಕನಕ ಉಡುಪಿಗೆ ಬರುವ ಮುನ್ನವೇ ಪುರಂದರದಾಸರು ವ್ಯಾಸರಾಯರ ಸಭೆಯಲ್ಲಿರುತ್ತಾರೆ. ವ್ಯಾಸರಾಯರ ಪ್ರೀತಿ-ಗೌರವಗಳಿಗೆ ಪಾರಾದ ಪುರಂದರದಾಸರಿಗೆ ಕನಕದಾಸರ ಬಗ್ಗೆ ಅಪಾರವಾದ ಗೌರವಗಳಿವೆ. ವ್ಯಾಸರಾಯರು ಮತ್ತು ಪುರಂದರ ದಾಸರಿಬ್ಬರೂ ಕನಕದಾಸರ "ನೀ ಮಾಯೆಯೊಳಗೊ, ನಿನ್ನೊಳು ಮಾಯೆಯೊ?" ಎಂಬ ಕೀರ್ತನೆಯನ್ನು ಪ್ರಶಂಸಿಸುವುದರೊಂದಿಗೆ ಕನಕನಾಗಮನದ ಸಂದರ್ಭವನ್ನು ಕಿ.ರಂ ಸೃಷ್ಟಿ ಮಾಡಿದ್ದಾರೆ. ಅಲ್ಲದೆ ವ್ಯಾಸರಾಯರೇ "ಕನಕದಾಸರು ದಾಸಕೂಟದ ನಿಜವಾದ ಪ್ರತಿನಿಧಿ. ಹಳ್ಳಿಗಳಿಗೆ ಹೋಗಿ ಕನಕದಾಸರು ನೀತಿ, ಆಧ್ಯಾತ್ಮಿಕ ವಿಚಾರಗಳನ್ನು ಪ್ರಚಾರ ಮಾಡುತ್ತಿರುವರೆಂಬುದು" ಅವರ ಚರ್ಚೆಯ ವಿಷಯವಾಗಿತ್ತು.

ಇದೇ ಸಂದರ್ಭದಲ್ಲಿ ಕನಕನು ರಾಜರ ಹುಸಿ ಪರಾಕ್ರಮ ಹಾಗೂ ಡಾಂಭಿಕ ಪುರೋಹಿತ ವರ್ಗದ ವಿರುದ್ಧ ಧ್ವನಿ ಎತ್ತಿರುವುದನ್ನು ಪುರಂದರದಾಸರು ಪ್ರಸ್ತಾಪಿಸುವುದು ಮುಖ್ಯ. ವ್ಯಾಸಕೂಟ–ದಾಸಕೂಟಗಳ ನಡುವಿನ ಕನ್ನಡ–ಸಂಸ್ಕೃತಗಳ ಪೈಪೋಟಿಯ ದುರಂತದ ಬಗ್ಗೆ ಅವರ ವಿಷಾದವನ್ನು ಇಲ್ಲಿ ಚರ್ಚಿಸುತ್ತಾರೆ. ವ್ಯಾಸರಾಯರು ವೇದಾಂತಗಳನ್ನು ಅಧ್ಯಯನ ಮಾಡಿ ಪಂಡಿತರಾಗಿದ್ದರೂ ಕನ್ನಡಾಭಿಮಾನದ ಗುಣ ಹೊಂದಿರುವುದನ್ನು ಪುರಂದರದಾಸರು ಮನಃ ಪೂರ್ವಕವಾಗಿ ಶ್ಲಾಘಿಸಿದ್ದಾರೆ.

ಯುದ್ಧದ ಭೀತಿಯು ನಾಡಿನ ತುಂಬಾ ಹರಡುತ್ತಿರುವುದರಿಂದ ಜನರ ಮನಸ್ಸಿಗೆ ಧೈರ್ಯ, ಸಮಾಧಾನ ತರಲು ಮಾತೃಭಾಷಾ ರಚನೆಯೇ ಉತ್ತಮ ಮಾರ್ಗವೆಂದು ವ್ಯಾಸರಾಯರು ನುಡಿಯುವುದು ಬಹಳ ಮುಖ್ಯ. ಕಿ.ರಂ ನಾಗರಾಜರ ವೈಚಾರಿಕತೆ ಇಲ್ಲೆಲ್ಲಾ ಪ್ರಖರವಾಗಿ ಹೊರಹೊಮ್ಮುತ್ತದೆ. "ಶಸ್ತ್ರಬಲದ ವಿರುದ್ಧ ಆತ್ಮಬಲ ಬೆಳೆಯಬೇಕಾಗಿದೆ ಎಂಬ ಮಾತನ್ನು ಕಿ.ರಂ. ಈ ಸಂದರ್ಭದಲ್ಲಿ ಹೇಳಿರುವುದು ಇದಕ್ಕೆ ಸಾಕ್ಷಿಯಾಗಿದೆ. ಕಾಗಿನೆಲೆಯ ಪಂಡಿತರ ತಿರಸ್ಕಾರಕ್ಕೊಳಗಾದ ಕನಕದಾಸರ 'ರಾಮಧಾನ್ಯ ಚರಿತ್ರೆ' ಯನ್ನು ಪುರಂದರದಾಸರು ವ್ಯಾಸರೆದುರಿನಲ್ಲಿ ಪ್ರಶಂಸೆ ಮಾಡುವುದೂ ಮುಖ್ಯ. ಒಟ್ಟಿನಲ್ಲಿ ಕನಕದಾಸರಿಂದ ದಾಸಕೂಟಕ್ಕೆ ಬಲ. ಸತ್ವ, ಕಸುವು ಒದಗಿರುವುದನ್ನು ಅವರಿಬ್ಬರೂ ಚರ್ಚಿಸುವಾಗಲೇ ಕನಕ ತನ್ನ ಸಂಗಡಿಗರೊಂದಿಗೆ ಉಡುಪಿಗೆ ಬಂದಿರುವ ಸಂಗತಿ ತಿಳಿಯುತ್ತದೆ.

ಪುರಂದರದಾಸರು ತಾವೇ ಸ್ವತಃ ಪ್ರತಿಭಾವಂತ ಕವಿ–ಕೀರ್ತನಕಾರರೆನಿಸಿದ್ದರೂ ಕನಕದಾಸರ ಕೀರ್ತನೆಗಳ ಮೌಲ್ಯವನ್ನು ಕೊಂಡಾಡುವುದು ಅವರ ಹೃದಯವಂತಿಕೆಯ ಕುರುಹುಗಿದೆ. ಆದರೆ ಕನಕದಾಸರು ತಮ್ಮ ಕೀರ್ತನೆಗಳೆಲ್ಲವೂ ಕೇಶವನ ಧ್ವನಿಯಾಗಿದ್ದು ಅವು ಕನ್ನಡದ ಸ್ವತ್ತಾಗಿದೆಯೆಂದು ವಿನಯದಿಂದ ಹೇಳುವರಲ್ಲದೆ ತಾವು ಕವಿತೆಗಳ ಮೂಲಕ ಜನರೆಲ್ಲರ ಜಾತಿ–ಮತಗಳ ಕುರುಡು ನಂಬಿಕೆಗಳ ವಿರೋಧದ ಧ್ವನಿಯಾಗಿರುವುದು ಅಕ್ಷರ ಗರ್ವಿತರಿಗೆ ಒಳ್ಳೆಯ ಏಟನ್ನು ಕೊಟ್ಟಿರುವೆನ್ನುವರು. ಅಲ್ಲದೆ ಕನಕದಾಸರು "ಜನರು ಮತ–ಮತೀಯ ದಾಸ್ಯದಿಂದ ಬಿಡುಗಡೆ ಪಡೆಯಬೇಕಾಗಿದೆ. ಮಾಯೆ ಎಲ್ಲರ ನೆರಳಾಗಿ ಕಾಡುತ್ತಿದೆ. ಮನಸ್ಸಿನ ವಿಚಾರವೇ ಮಾಯೆ. ಮಾಯೆಯಿಂದ ದಾಸ್ಯ ಆವರಿಸುತ್ತದೆ. ಈ ಮಾಯೆಯೇ ಒಂದು ದೀಪ. ಇದರ ಆಕರ್ಷಣೆಗೊಳಗಾದವರು ಪತಂಗದಂತೆ ಸಾಯುತ್ತಾರೆ" ಎಂದರಲ್ಲದೆ "ಸತ್ಯವೇ ಬಾಳಿನ ಧ್ಯೇಯವಾಗಬೇಕೆಂದು" ಪ್ರತಿಪಾದಿಸಿದರು. ವ್ಯಾಸರಾಯರು ಮತ್ತು ಪುರಂದರದಾಸರು ಕನಕನ ವಿಚಾರಧಾರೆಗೆ ತಲೆಬಾಗುತ್ತಾರೆ.

## ೨.೮ ಬಾಳೆಹಣ್ಣಿನ ಪ್ರಸಂಗದ ಮುಖೇನ ತಾತ್ವಿಕತೆಯ ಪ್ರತಿಪಾದನೆ:

ವ್ಯಾಸರಾಯರೇನೋ ಕನಕನ ಗುಣ-ಸತ್ವಗಳನ್ನು ಬಲ್ಲವರಾಗಿದ್ದು, ಆತನ ವಿಚಾರದಲ್ಲಿ ವಿಶೇಷ ಮಮತೆ-ಆದರಗಳನ್ನು ಉಳ್ಳವರಾಗಿದ್ದರು. ಆದರೆ ತಮ್ಮ ಶಿಷ್ಯರು ಕನಕನ ಬಗ್ಗೆ ಗೌರವ ಹೊಂದಿಲ್ಲವೆಂಬ ಸಂಗತಿಯು ನೋವು ತಂದಿತು. ವ್ಯಾಸರಾಯರ ಶಿಷ್ಯರಿಗೆ ಜ್ಞಾನವಿದ್ದರೂ ಅಹಂಕಾರದಿಂದ ವರ್ತಿಸುತ್ತಿದ್ದರು. ಅವರೆಲ್ಲರಿಗೂ ಕನಕನ ಹಿರಿಮೆಯನ್ನೂ, ಶಿಷ್ಯರ ಅಪಕ್ವತೆಯನ್ನು ಮನದಟ್ಟು ಮಾಡಿಕೊಡಬೇಕೆಂದು ನಿರ್ಧರಿಸುವರು.

ವ್ಯಾಸರಾಯರ ಸಭೆಯಲ್ಲಿ ಎಲ್ಲರೂ ಸೇರಿರುವಾಗ ಪುರಂದರರು ಕನಕದಾಸರ ಹೃದಯ ವೈಶಾಲ್ಯವನ್ನು ಮೆಚ್ಚಿ ನುಡಿದರು. ಪುರೋಹಿತರು ವೇದಶಾಸ್ತ್ರಗಳನ್ನು ಓದಿದ್ದರೂ ದಾಸತತ್ತ್ವಕ್ಕೆ ಮಸಿ ಬಳಿಯುತ್ತಿರುವರೆಂದು ಕನಕ ಹೇಳಿದಾಗ, ಆತನ ಸಂಗಡಿಗರು ಜಾತಿಭಾವನೆಯನ್ನು ಖಂಡಿಸುವರು. ಲೋಕದಲ್ಲಿ ನಾನಾ ಬಗೆಯ ಬಣ್ಣದ ಹಸುಗಳಿದ್ದರೂ ಅವರ ಹಾಲಿನ ಬಣ್ಣ ಒಂದೇ ಆಗಿರುತ್ತದೆ. ಕಬ್ಬು ಡೊಂಕಾಗಿದ್ದರೂ ಅದರ ಸಿಹಿಗೆ ಡೊಂಕು ಬರುವುದಿಲ್ಲ. ಇದೇರೀತಿ ಮಂತ್ರಪಠನೆ, ಧ್ಯಾನ, ಜಪ ಮಾಡಿದರೂ ಕುಟಿಲತನವನ್ನು ಬಿಡದಿದ್ದರೆ ಎಲ್ಲ ಸತ್ಕಾರ್ಯಗಳೂ ವ್ಯರ್ಥವೆಂದರು. ಈ ಚರ್ಚೆಯ ಸಂದರ್ಭದಲ್ಲೇ ಕೆಲವು ಪಂಡಿತರು ಅಂದು ಕನಕನಿಗೆ ಯಾವುದಾದರೂ ತರ್ಕದ ಇಕ್ಕಟ್ಟು ಕಲ್ಪಿಸಿ, ಅದರೊಳಗೆ ಆತನನ್ನು ಸಿಲುಕಿಸಬೇಕೆಂದು ತಮ್ಮ ತಮ್ಮಲ್ಲೇ ಮಾತನಾಡಿಕೊಳ್ಳುವರು. ಕನಕನು ಜಿಜ್ಞಾನಸೆಯೇ ಕೂಡದು, ಎಲ್ಲವನ್ನೂ ಒರೆಗೆ ಹಚ್ಚುವವನು ಕೇಶವನೊಬ್ಬನೇ ಎನ್ನುವನು. ಪುರಂದರರು "ನಿಜವಾದ ರತ್ನ ಪರೀಕ್ಷಕರು ಇಲ್ಲದ ಕಡೆ ರತ್ನವನ್ನು ಹೊರತೆಗೆದರೆ ಯಾವ ಪ್ರಯೋಜನವೂ ಇಲ್ಲ ವೆಂದರು. ವ್ಯಾಸರಾಯರು ಮಾತ್ರ ನಿರ್ಲಿಪ್ತರಾಗಿದ್ದರು.

ಅಷ್ಟರಲ್ಲಿ ಕೃಷ್ಣದೇವರಾಯರಿಂದ ಪ್ರಸಾದಾಮಗನವಾಯಿತು. ವ್ಯಾಸರಾಯರು ಎಲ್ಲರಿಗೂ ಒಂದೊಂದು ಬಾಳೆಹಣ್ಣನ್ನು ತಿನ್ನಲುಕೊಟ್ಟು, ಅದನ್ನು ಯಾರೂ ಇಲ್ಲದ ಕಡೆ ತಿನ್ನುವಂತೆಯೂ ಹಾಗೆ ತಿಂದ ಬಗ್ಗೆ ವರದಿ ಒಪ್ಪಿಸಲು ಸೂಚಿಸಿದರು. ವ್ಯಾಸರಾಯರು ಇದ್ದಕ್ಕಿದ್ದ ಹಾಗೆ ವಾದ-ವಿವಾದಗಳನ್ನು ನಡೆಸದೆ ಈ ಕೆಲಸ ಕೊಟ್ಟರೇಕೆಂದು ಯಾರಿಗೂ ಹೊಳೆಯರಲಿಲ್ಲ. ವ್ಯಾಸರಾಯರ ಶಿಷ್ಯರು ಒಬ್ಬೊಬ್ಬರು ಒಂದೊಂದು ಕಡೆ ಹೋಗಿ ಬಾಳೆಹಣ್ಣು ತಿಂದು ಬಂದರು. ಒಬ್ಬರು ಮುಸುಕು ಹಾಕಿಕೊಂಡು ತಿಂದರೆ, ಮತ್ತೊಬ್ಬರು ಪಾಳುಗೋಡೆಯ ಹಿಂಭಾಗ, ಮತ್ತೊಬ್ಬ ಉಗ್ರಾಣದ ಕೋಣೆಯಲ್ಲಿ ಬಾಳೆಹಣ್ಣನ್ನು ತಿಂದುದಾಗಿ ವರದಿ ನೀಡುವರು. ಆದರೆ ಕನಕದಾಸರು ಮಾತ್ರ ಭಗವಂತನು ಎಲ್ಲೆಡೆಯಲ್ಲೂ ಇರುವುದರಿಂದ ಯಾರೂ ಇಲ್ಲದ ಸ್ಥಳವೇ ಇಲ್ಲ. ಆದ್ದರಿಂದ

ಬಾಳೇಹಣ್ಣು ತಿನ್ನಲಾಗಲ್ಲಗಲವೆಂದರು. ಕನಕನ ಮಾತುಕೇಳಿ ವ್ಯಾಸರಾಯರಿಗೆ ಪರಮಾನಂದವಾಯಿತು. ಕನಕದಾಸರೇ ನಿಜವಾದ ಜ್ಞಾನಿಗಳು-ಭಕ್ತರು, ಕೇಶವನನ್ನು ಸಾಕ್ಷಾತ್ಕಾರಿಸಿಗೊಂಡಿರುವವರು ಎಂದು ಶ್ಲಾಘಿಸಿದರು.

ವ್ಯಾಸರಾಯರು ತಮ್ಮ ಪರೀಕ್ಷೆಯನ್ನು ಮುಂದುವರೆಸುತ್ತಾ ತಮ್ಮ ಮುಷ್ಠಿಯನ್ನು ಬಿಗಿಹಿಡಿದು ಮುಷ್ಠಿಯೊಳಗೇನಿದೆ? ಎಂದು ಪ್ರಶ್ನಿಸಿದರು. ಮುಷ್ಠಿಯಲ್ಲಿ ತುಳಸಿ ಬೀಜವಿದೆ, ನಾಮದ ಮಣ್ಣಿದೆ, ಕೇಸರಿಯಿದೆ, ಕಲ್ಲುಸಕ್ಕರೆ ಇದೆ ಎಂದು ಒಬ್ಬೊಬ್ಬ ಶಿಷ್ಯರು ಒಂದೊಂದು ಉತ್ತರವಿತ್ತರು. ಕನಕದಾಸರು ಮಾತ್ರ "ಕೇಶವನಿದ್ದಾನೆ, ನನ್ನ ಕೇಶವ" ಎನ್ನುವುರು. ವ್ಯಾಸರಾಯರು ಮುಷ್ಠಿಯನ್ನು ತೆರೆದು ತೋರಿಸಿದಾಗ ಅಲ್ಲಿ ಸಾಲಿಗ್ರಾಮವಿತ್ತು. ಕನಕರ ಜ್ಞಾನ ಅರಿತು ಎಲ್ಲರೂ ಆಶ್ಚರ್ಯಚಕಿತರಾದರು. ಪಂಡಿತರು ತಮಗೆ ಇನ್ನೂ ಪರಿಪೂರ್ಣವಾಗಿಲ್ಲವೆಂದು ತಿಳಿದರು. ವ್ಯಾಸರಾಯರು ತಮಗೆ ಯಾರನ್ನೂ ಪರೀಕ್ಷೆ ಮಾಡುವ ಉದ್ದೇಶವಿಲ್ಲವೆಂದೂ, ಇದು ತಮ್ಮನ್ನು ತಾವು ತಿಳಿಯಲು ಮಾಡಿದ ಒಂದು ಪ್ರಯೋಗವಿದೆನ್ನುವರು.

ಇಲ್ಲಿ ಕಿ.ರಂ. ನಾಗರಾಜ ಅವರು ಕನಕದಾಸರು ಜೀವನದಲ್ಲಿ ನಡೆಸಿದರೆನ್ನಲಾದ ಪವಾಡಗಳಲ್ಲಿ ಬಾಳೇಹಣ್ಣಿನ ಪ್ರಸಂಗವನ್ನು ಕನಕರ ಜ್ಞಾನ ನಿರೂಪಣೆಗಾಗಿ ವ್ಯಾಸರಾಯರು ಬಳಸಿಕೊಂಡರೆಂದು ಚಿತ್ರಿಸಿರುವುದು ಗಮನಾರ್ಹ. ಉಳಿದ ಪವಾಡಗಳ ಬಗೆಗೆ ನಾಟಕಕಾರರಿಗೆ ಅಷ್ಟು ಶ್ರದ್ಧೆ ಇದ್ದಂತಿಲ್ಲ. ಇದು ಅವರ ಪ್ರಗತಿಪರ ಧೋರಣೆಯನ್ನು ಬಿಂಬಿಸುತ್ತದಲ್ಲದೆ, ಹೆಚ್ಚು ಸಮಕಾಲೀನ ಚಿಂತನೆಗೆ ಸಮೀಪದಲ್ಲಿದೆ ಎಂದು ಭಾವಿಸಲು ಸಾಧ್ಯವಿದೆ.

**೨.೯ ಉಡುಪಿಯಲ್ಲೂ ದೇವಾಲಯ ಪ್ರವೇಶದ ತೊಡಕು:**

ವ್ಯಾಸರಾಯರು ಪರ್ಯಾಯ ಉತ್ಸವಕ್ಕೆ ಎಲ್ಲರನ್ನೂ ಆಹ್ವಾನಿಸಿದ್ದರೂ ಪಂಡಿತರು ಮಾತ್ರ ಕನಕನನ್ನು ದೇವಾಲಯಗಳಿಗೆ ಬಿಡುವುದಿಲ್ಲ. ವ್ಯಾಸರಾಯರು ಮಾತ್ರ ಉಡುಪಿಯ ಕೃಷ್ಣನ ದೇವಾಲಯದೊಳಗೆ ಯಾರು ಬೇಕಾದರೂ ಬರಬಹುದೆಂಬ ಉದಾರ ನಿಲುವನ್ನು ತಾಳಿರುತ್ತಾರೆ. ಆದರೆ ಮಠದ ಪಂಡಿತ ವರ್ಗಕ್ಕೆ ಈ ವಿಶಾಲ ಭಾವನೆ ಇಲ್ಲ. ಆದ್ದರಿಂದ ಅವರು ಕನಕದಾಸರು ದೇವಾಲಯದೊಳಗೆ ಬರಲು ಯತ್ನಿಸಿದಾಗ ಪಂಡಿತರು ಅವರನ್ನು ತಡೆಯುವರು.

ಈ ಸಂದರ್ಭದಲ್ಲಿ ಕಿ.ರಂ. ಅವರು ಕೃಷ್ಣ ಕಿಂಡಿಯೊಂದರ ಮುಖಾಂತರ ಕನಕನಿಗೆ ದರ್ಶನ ನೀಡಿ 'ಕನಕನ ಕಿಂಡಿ'ಯ ಐತಿಹ್ಯ ನಿರ್ಮಾಣವಾದ ಸಂದರ್ಭವನ್ನು

ಪ್ರಜ್ಞಾಪೂರ್ವಕವಾಗಿ ನಿರಾಕರಿಸಿದ್ದಾರೆ. ಅವರು 'ಕಾಲಜ್ಞಾನಿ ಕನಕ' ನಾಟಕದಲ್ಲೆಲ್ಲಿಯೂ ಕನಕನ ಕಿಂಡಿಯ ಪ್ರಸ್ತಾಪವನ್ನೇ ಮಾಡಿಲ್ಲ. ಬದಲಿಗೆ ಕನಕದಾಸರು ಕೇಶವನನ್ನು ಬ್ರಾಹ್ಮಣರ ಸೆರೆಯಿಂದ ಬಿಡಿಸಿ, ಬಯಲಿಗೆಳೆ ತಂದು ಸ್ವತಂತ್ರಗೊಳಿಸಿದರೆಂದು ಕಿ.ರಂ. ಚಿತ್ರಿಸಿದ್ದಾರೆ. ಇಲ್ಲಿಯೂ ನಾಟಕಕಾರರು ಪ್ರಗತಿಪರ ಚಿಂತನೆಯ ದರ್ಶನವಾಗುತ್ತದೆ. ಕನಕದಾಸರ ಬಗೆಗಿನ ಈ ಪ್ರಮುಖ ಐತಿಹ್ಯವನ್ನು ಬಹುಶಃ ವೈಚಾರಿಕ ಮನೋಭಾವದ ನಾಟಕಕಾರರೂ ಒಪ್ಪುವುದಿಲ್ಲ. ಆದ್ದರಿಂದಲೇ ಅದನ್ನು ಚಿತ್ರಿಸುವ–ಪ್ರಸ್ತಾಪಿಸುವ ಗೋಜಿಗೆ ಅವರು ಹೋಗುವುದಿಲ್ಲ. ಇದು ನಾಟಕದ ಅತ್ಯಂತ ಮುಖ್ಯವಾದ ಸಂಗತಿಯಾಗಿ ಚ್ರ್ಚಿಸಲು ಸಾಧ್ಯವಿದೆ.

ಕನಕ ದೇವಾಲಯದೊಳಗೆ ಬರುವುದನ್ನು ಪಂಡಿತರು ತಡೆದಾಗ ಪ್ರವೇಶಕ್ಕೆ ಅವಕಾಶ ನೀಡಿರೆಂದು ಕನಕರು ವಿನಂತಿಸಕೊಳ್ಳುವುದಿಲ್ಲ. ಬದಲಾಗಿ ಅವರು:

"ಎಲೈ ಕೇಶವನೆ,
ನೀನು ಬಯಲಿನ ಆಲಯದಲ್ಲಿರುವೆ ಎಂದು ಹಾಡಿದ್ದೇನೆ.
ನೀನು ಬಯಲಿಗೆ ಬಾ:
ಕತ್ತಲೆಯ ಕೋಣೆಯಂತಿರುವ ಗರ್ಭಗುಡಿಯಿಂದ
ಹೊರಗೆ ಬಾ" ಎಂಡು ಕೃಷ್ಣನಲ್ಲಿ ಮೊರೆಯಿಟ್ಟರು.

ಕನಕದಾಸರು ಆಡಿದ ಮಾತುಗಳನ್ನು ಕೇಳಿ ಪಂಡಿತರು ನಕ್ಕರಲ್ಲದೆ, "ಬಾ ಎಂದರೆ ದೇವರು ಬಂದು ಬಿಡುವನೆ?" ಎಂದು ಕೂಗಿದರು. ಕನಕದಾಸರು ಮಾತ್ರ ವಿಚಲಿತಲಾಗದೆ "ಬಂಧನದಲ್ಲಿರುವ ಕೇಶವನನ್ನು ಬಿಡಿಸಕೊಂಡು ಹೋಗುವುದೇ ತಮ್ಮ ಉದ್ದೇಶವೆಂದರು. ಅವರು ಮತ್ತೆ ಮತ್ತೆ "ಕೇಶವಾ, ಕೇಶವಾ ಬಾ ಬಾಬಾ" ಎನ್ನುವರು. ಪಂಡಿತರು "ನೀನು ಎಷ್ಟೇ ಕೂಗಿದರೂ ಒಳಗಿರುವ ಕೃಷ್ಣ ಎದ್ದು ಬರಲಾರ" ಎಂದರಲ್ಲದೆ, ದೇವಸ್ಥಾನವನ್ನು ಅಪವಿತ್ರಗೊಳಿಸಲು ಕನಕ ಬಂದಿದ್ದಾನೆ. ದೇವಾಲಯ ಅಪವಿತ್ರವಾದರೆ ದೇವರೂ ಅಪವಿತ್ರವಾದಂತೆ ಎನ್ನುವರು. ಕನಕನ ಸಂಗಡಿಗರು ಪಂಡಿತರನ್ನು ಜನರಲ್ಲಿ ದೇವರೆಂದರೆ ಭಯ ಹುಟ್ಟಿಸುತ್ತಾರೆ. ತಾರತಮ್ಯ ಮಾಡುತ್ತಾರೆ. ಮನುಷ್ಯರನ್ನು ಅಗೌರವಿಸುತ್ತಾರೆ. ಇಂತಹ ಜನರೇ ಸುತ್ತುವರಿದಿರುವ ದೇವರು ಅಲ್ಲಿಂದ ಎದ್ದು ಬರುವುದೇ ಸರಿಯೆಂದು ಗುಡಿಗಿದರು – ಹೀಗೆ ಮಾತಿನ ಚಕಮಕಿ ನಡೆದಾಗ ಪುರಂದರು ಅಲ್ಲಿಗೆ ಆಗಮಿಸಿ "ದೇವಸ್ಥಾನ ವ್ಯಾಪಾರ ಕೇಂದ್ರವಾಗಬಾರದು; ಜನಬೇಡ, ಜಾತಿಬೇಕೊ ಎಂಬ ಧೋರಣೆ ಸಲ್ಲದೆಂದರು ಮಾನವಜನ್ಮ ದೊಡ್ಡದು ಆದ ಹಾನಿ ಮಾಡಿಕೊಳ್ಳಬೇಡಿರೆಂದು" ಪಂಡಿತರಿಗೆ ಬೋಧಿಸಿದರು. ಜಾತಿ ಮತ

ವಿಚಾರವನ್ನು ಮುಂದಿಟ್ಟುಕೊಂಡು ಅಹಂಭಾವ ಮೆರೆಯುವುದು ಸರಿಯಲ್ಲವೆಂದರು. ಆ ಹೊತ್ತಿಗೆ ಕನಕ ಕರೆಗೆ ಓಗೊಟ್ಟು ಕೃಷ್ಣ ದೇವಾಲಯದಿಂದ ಹೊರಗೆ ಬಂದೇಬಿಟ್ಟನು. ನಾಟಕದ ಅಂತ್ಯದಲ್ಲಿ ಕೇಶವನು ಪುರಂದರ ಮತ್ತು ಕನಕದಾಸರ ಹೆಗಲುಗಳ ಮೇಲೆ ಕೈ ಹಾಕಿ ನಡೆದುಬಿಡುವನು. ಅಲ್ಲದೆ ಕೇಶವನು ಅಂದಿನಿಂದ ತಾನು ದಾಸರೊಡನೆ ಪರ್ಯಟನ ಗೈಯುವುದಾಗಿ ಹೇಳಿದನು.

ವಾಸ್ತವದ ದೈವನನ್ನು ಅನ್ವೇಷಿಸುವುದು ಮತ್ತು ನಿಜ ಬದುಕನ್ನು ಅರಿಯುವುದರ ಬಗ್ಗೆ ಕನಕ ಮತ್ತು ಕಿ.ರಂ. ಇಬ್ಬರೂ ಒಂದೇ ಜಾಡನ್ನು ಹಿಡಿಯುವುದನ್ನು ಕಾಣಬಹುದು. ನಾಟಕದ ಕೊನೆಯಲ್ಲಿ ವ್ಯಾಸ ಪುರಂದರು ಸೇರಿಕೊಳ್ಳುವ ದೃಶ್ಯಗಳು ಇಡೀ ನಾಟಕಕ್ಕೆ ಮುಖ್ಯ ಹೊಳಹುಗಳನ್ನು ನೀಡುತ್ತವೆ. ಇಡೀ ಪಂಡಿತ ವರ್ಗ ಕನಕನ ಜ್ಞಾನವನ್ನು ತಿರಸ್ಕರಿಸಿದ್ದ ಸಂದರ್ಭದಲ್ಲಿ ವ್ಯಾಸ – ಪುರಂದರು ಅವನನ್ನು ಪ್ರೀತಿಯಿಂದ ಅಪ್ಪಿಕೊಂಡಿದ್ದು ಇತಿಹಾಸವೇ ಆಗಿದೆ.

ಕಿ.ರಂ. ಅವರು ಒಟ್ಟು ನಾಟಕದಲ್ಲಿ ಎರಡು ಕಡೆ ದೇವಾಲಯ ಪ್ರವೇಶಗಳನ್ನು ತಂದಿದ್ದಾರೆ. ಒಂದು ಕಾಗಿನೆಲೆಯಲ್ಲಿ ಮತ್ತೊಂದು ಉಡುಪಿಯಲ್ಲಿ. ಕಾಗಿನೆಲೆಯಲ್ಲಿ ಪಂಡಿತ ವರ್ಗದ ವಿರುದ್ಧ ವಾಗ್ವಾದ ಬೆಳೆಸಿದರೆ ಉಡುಪಿಯಲ್ಲಿ ನೇರವಾಗಿ ಕೇಶವನೊಂದಿಗೆ ಮತ್ತು ಅವನನ್ನು ಬಂಧಿಸಿರುವ ಪುರೋಹಿತ ಶಾಹಿಯ ವಿರುದ್ಧ ಹೋರಾಡುವುದು ಮುಖ್ಯ ಈ ದೃಶಸಿಗಳನ್ನು ಕಿ.ರಂ. ಸೊಗಸಾಗಿ ಚಿತ್ರಿಸಿದ್ದಾರೆ. ಕನಕನು ದೈವತ್ವವು ಮನುಷ್ಯತ್ವದ ಬೆನ್ನಲ್ಲೇ ಇರುತ್ತವೆ ಎಂದು ಭಾವಿಸುತ್ತಾನೆ. ಆಧುನಿಕ ಭಾರತೀಯ ಸಂದರ್ಭದಲ್ಲಿ ದೈವತ್ವವನ್ನು ಈ ರೀತಿ ಕಂಡವರು ಕವಿ ರವೀಂದ್ರನಾಥ ಠಾಗೋರ್ ಮತ್ತು ಕುವೆಂಪು ಮಾತ್ರವೇ.

## ಅಧ್ಯಾಯ–೩

## ಕಿ.ರಂ. ಅವರ "ನೀಗಿಕೊಂಡ ಸಂಸ" : ಒಳಗೊಂಡಿರುವ ಸವಾಲುಗಳು.

ಕಿ.ರಂ. ನಾಗರಾಜ ಅವರ ಮತ್ತೊಂದು ನಾಟಕ **"ನೀಗಿಕೊಂಡ ಸಂಸ"**. ೧೮೯೮ – ೧೯೩೯ ರ ಅವಧಿಯಲ್ಲಿ ಜೀವಿಸಿದ್ದ ಕನ್ನಡದ ಮಹತ್ವದ ನಾಟಕಕಾರರಲ್ಲಿ ಸಂಸ ಮುಖ್ಯರು. ಒಬ್ಬ ನಾಟಕಕಾರನ ವೈಯುಕ್ತಿಕ ಬದುಕಿನ ವೃತ್ತಾಂತವನ್ನು ಮತ್ತೊಬ್ಬ ನಾಟಕಕಾರ ಚಿತ್ರಿಸುವಾಗ, ಆತನ ತಾತ್ವಿಕ ವಿವರಗಳನ್ನು ಒಳಗು ಮಾಡಿಕೊಳ್ಳುವುದು ಒಂದು ಸವಾಲು" ಸಂಸರ ಜೀವನವನ್ನು ಹತ್ತಿರದಿಂದ ಕಂಡಿದ್ದ ಅ.ನ. ಸುಬ್ರಮೌನಂ ಅವರು ಸಂಸರ ಬಗ್ಗೆ ಹೀಗೆ ಅಭಿಪ್ರಾಯ ಪಡುತ್ತಾರೆ.: "ಸಂಸ" ರೊಡನೆ ಮಾತು ಒಂದು ಸಾಹಸವೇ ಎರಡೂ ತೂಕದ ಕತ್ತಿಯಂತೆ" (ಪುಟ–೨, ಸಂಸ ಸ್ಮರಣೆ, ಅ.ನ. ಸುಬ್ರಮಿಕಾನಂ)

**೩.೧ ಸಂಸ ಮತ್ತು ಕನ್ನಡ ನಾಟಕ ಪರಂಪರೆ: ಈ ಶತಮಾನದ ಪ್ರಮುಖ ನಾಟಕಕಾರರಲ್ಲಿ ಸಂಸರು**

ಮುಖ್ಯರು ಆಧುನಿಕ ಸಾಹಿತ್ಯ ವಲಯದಲ್ಲಿ ಸಂಸರ ಹೆಸರು ಸ್ವಲ್ಪಮಟ್ಟಿಗೆ ಅಪರಿಚತವಾಗಿದ್ದರೂ ಕನ್ನಡ ನಾಟಕ ಪರಂಪರೆಯನ್ನು ನಾವು ಅಭ್ಯಸಿಸುವಾಗ ಸಂಸರನ್ನು ದಾಟಿಯೇ ಮುಂದೆ ಹೋಗಬೇಕಾಗುತ್ತದೆ. ಅಂತಹ ವಿಶಿಷ್ಟ ಸ್ಥಾನ ಸಂಸರದ್ದು.

ಸಂಸರ ನಿಜ ನಾಮದೇಸು ವಿ. ಎನ್. ಸ್ವಾಮಿ ಅಥವಾ ವೆಂಕಟಾದ್ರಿ ಆಯ್ಯರ್ ಎಂದು ಆದರೆ "ಸಂಸ" ಎನ್ನುವ ಹೆಸರು ಅವರಿಗೆ ಒದಗಿದ್ದು ಒಂದು ವಿಶಿಷ್ಟವಾದ ಸಂದರ್ಭದಲ್ಲಿ ಅವರು ತಮ್ಮ ಪ್ರಸಿದ್ಧ ನಾಕವಾದ 'ವಿಗಡ ವಿಕ್ರಮರಾಯ'ದ ಹಸ್ತಪ್ರತಿಯನ್ನು ಪ್ರಬುದ್ಧ ಕರ್ಣಾಟಕ ಪತ್ರಿಕೆಯ ಪ್ರಕಟಣೆಗೆಂದು ಕಳುಹಿಸಿದಾಗ ಕೊನೆಯಲ್ಲಿ ನಮೂದಿಸಿದ್ದ ಹೆಸರು 'ಕಂಸ' ಎಂಬುದು ಆದರೆ ಈ 'ಕಂಸ' ಎನ್ನವ ಪದವೇ ಮುದ್ರಾರಾಕ್ಷಸನ ಹಾವಳಿಯಿಂದ 'ಸಂಸ' ಎಂದು ಅಚ್ಚಾಯಿತಂತೆ ಈ ಹೆಸರೇ ಮುಂದೆ ಶಾಶ್ವತವಾಗಿ ಉಳಿಯಿತಂತೆ.

ಸಂಸರು ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲದಲ್ಲಿ ೧೮೯೮ರಲ್ಲಿ ಜನಿಸಿದರು. ಎಳೆವೆಯಿಂದಲೇ ಪ್ರತಿಭಾವಂತರಾದ ಸಂಸರು ತಮ್ಮ ಇಪ್ಪತ್ತನೆಯ ವಯಸ್ಸಿನಲ್ಲಿಯೇ ಸುಗುಣಗಂಭಿರ' ಎನ್ನುವ ಪ್ರಥಮ ನಾಟಕವನ್ನು ಬರೆದರು ಈ ನಾಟಕವೇ ಬೆಂಗಳೂರಿನ ಎ.ಡಿ.ಎ ಸಂಸ್ಥೆ ನಡೆಸಿದ ಶ್ರೀ ಕಂಠೀರವ ನರಸರಾಜ ಕನ್ನಡ ನಾಟಕ ಸ್ಪರ್ಧೆಯಲ್ಲಿ ಎರಡನೆಯ

ಬಹುಮಾನವನ್ನು ಪಡೆಯಿತು. ಆದರೆ ಇದೇ ಸ್ಪರ್ಧೆಯಲ್ಲಿ ಕೈಲಾಸಂ ಅವರ **"ಟೊಳ್ಳುಗಟ್ಟಿ"** ಪ್ರಥಮ ಸ್ಥಾನವನ್ನು ಪಡೆಯಿತು. ಇಲ್ಲಿಂದ ಶುರವಾದ ಸಂಸರ ನಾಟಕ ರಚನೆ ನಿರಂತರವಾಗಿ ಮುಂದುವರೆಯಿತು.

ಆಧುನಿಕ ಕನ್ನಡ ನಾಟಕ ಪರಂಪರೆಗೆ ಬೇಗನೆ ಒದಗಿದ ಆಘಾತವೆಂದರೆ ಸಂಸರ ಸಾವು. Persecution Complex ನಿಂದ ನರಳುತ್ತಿದ್ದ ಸಂಸರಿಗೆ ಬಹುಕಾಲ ತನ್ನನ್ನು ಪೊಲೀಸ್‌ರು ಬೆನ್ನಟ್ಟುತ್ತಿದ್ದಾರೆಂಬ ಸಂಶಯ ನಿರಂತರವಾಗಿ ಉಳಿಯಿತು. ಈ ದ್ವಂದ್ವಗಳ ಸುಳಿಯಲ್ಲಿ ಸಿಕ್ಕಿದ ಸಂಸರು ತಮ್ಮ ಎಲ್ಲಾ ಸಂಬಂಧಗಳನ್ನು ದೂರವಿಟ್ಟು ಬದುಕಿದರು. ಇದು ಪರ್ಯಾವಸಾನಗೊಂಡಿದ್ದು. ಅತ್ಮಹತ್ಯೆಯಲ್ಲಿ ಪ್ರಸಿದ್ಧ ನಾಟಕಕಾರ ಸಂಸರು (೧೯೩೯) ನೆಯ ಇಸವಿಯಲ್ಲಿ ಅತ್ಮಹತ್ಯ ಮಾಡಿಕೊಂಡರು.

ಸಂಸರಿಗೆ ತಮ್ಮನ್ನು ಕಾಡಿದ ದ್ವಂದ್ವಗಳೇ ನಾಟಕ ರಚನೆಗೆ ಪ್ರೇರಣೆಗಳಾದವೂ ಏನೋ? ಏಕೆಂದರೆ ಅವರ ನಾಟಕದೊಳಗೂ ಈ ದ್ವಂದ್ವಗಳನ್ನು ಕಾಣುತ್ತೇವೆ. ಅವರ ನಾಟಕದ ಕೆಲವು ಪಾತ್ರಗಳ ಸ್ವಭಾವಗಳು ಸಂಸರ ವ್ಯಕ್ತಿತ್ವದ ಹಾಗೆ ಕಾಣವುದುಂಟು. ಸಂಬಂಧಗಳ ಬಗೆಗೆ ನಿರ್ಮೋಹಿಯಾದ ವಿಗಡವಿಕ್ರಮರಾಯ್ರು, ಕಾರ್ಯಸ್ಥಾನಗಳ ನಡುವೆ ಬದುಕುವ ರಣಧೀರ, ರಾಜನಿಷ್ಠೆಯುಳ್ಳ ಜನಸಾಮಾನ್ಯರು, ಹಲವಾರು ದೌರ್ಬಲ್ಯಗಳುಳ್ಳ ರಾಜಒಡೆಯರು–ಈ ಎಲ್ಲಾ ಪಾತ್ರಗಳು ಸಮ್ಮಿಲನಗೊಂಡು ರೂಪುಗೊಮಡಂತೆವೆ ಸಂಸರ ವ್ಯಕ್ತಿತ್ವ ಇಂತಹ ಸಂಸರ ವ್ಯಕ್ತಿತ್ವವನ್ನು ಆಧರಿಸಿಯೇ ಲಂಕೇಶರು "ಪೊಲೀಸರಿದ್ದಾರೆ ಎಚ್ಚರಿಕೆ" ಎಂಬ ನಾಟಕವನ್ನು , ಕಿ.ರಂ. ನಾಗರಾಜ ಅವರು ನೀಗಿಕೊಂಡ ಸಂಸ' ಎನ್ನುವ ನಾಟಕವನ್ನು ಬರೆದಿದ್ದಾರೆ.

ಸಂಸರು ಒಟ್ಟು ೨೩ ನಾಟಕಗಳನ್ನು ಬರೆದಿದ್ದರಂತೆ, ಅವುಗಳಲ್ಲಿ ನಮಗೆ ಸಿಕ್ಕಿರುವುದು ಆರು ನಾಟಕಗಳು ಮಾತ್ರ. ಈ ಆರು ನಾಟಕಗಳು ಮೈಸೂರಿನ ಇತಿಹಾಸಕಕೆ ಸಂಬಂಧಪಟ್ಟವು. ಅವರ ಸಮಕಾಲೀನರಾದ ಶ್ರೀರಂಗ, ಕೈಲಾಸಂರವರು ಸಾಮಾಜಿಕ ವಿಡಂಬನೆಯನ್ನೇ ನಾಟಕದ ಮುಖ್ಯ ವಸ್ತುವಾಗಿಟ್ಟುಕೊಂಡರೆ ಸಂಸರು ಕಣ್ಣುಹಾಯಿಸಿದ್ದು ಇತಿಹಾಸದ ಕಡೆಗೆ, ನಿಜವಾಗಿ ನೋಡಿದರೆ ಇಂಗ್ಲೆಂಡಿನಲ್ಲಿ ಶೇಕ್ಸ್‌ಪಿಯರ್ ಮಾಡಿದ್ದನ್ನೇ ಕನ್ನಡದಲ್ಲಿ ಸಂಸರು ಮಾಡಿದರು.

ಸಂಸರು ನಿಧನರಾಗಿ ಹಲವಾರು ವರ್ಷಗಳೇ ಕಳೆದು ಹೋಗಿದ್ದರೂ ಅವರು ನಾಟಕಗಳು ಬಗೆಗೆ ಇನ್ನೂ ಸರಿಯಾದ ವಿಮರ್ಶೆ ಬಂದಿಲ್ಲೆಂದೇ ಹೇಳಬೇಕು ಇದಕ್ಕೆ ಮುಖ್ಯ

ಕಾರಣವೆಂದರೆ ಅವರ ನಾಟಕಗಳ ಅಲಭ್ಯತೆ, ಆದರೆ ಇತ್ತೀಚಿನ ದಿನಗಳಲ್ಲಿ ಅವರ ನಾಟಕಗಳ ಬಗೆಗೆ ಕೆಲವು ಮಾತುಗಳು ಕೇಳಿ ಬರುತ್ತಿರುವುದು ಗಮನಾರ್ಹ, ಯಾಕೆಂದರೆ ಸಂಸರ ನಾಟಕದೊಳಗಡೆ ಪ್ರಕಟವಾಗುವ ರಾಜಕೀಯ ಪ್ರಕ್ಷಿಬ್ಧತೆಗೂ ವರ್ತಮಾನದ ಪ್ರಕ್ಷುಬ್ದತೆಗೂ ತೀರಾ ಹತ್ತಿರದ ಸಂಬಂಧವಿರುವುದು. ಕಂಡುಬರುತ್ತದೆ. ಈ ಕಾರಣದಿಂದ ಸಂಸರು ಈ ದಿನಗಳಲ್ಲೂ ಪ್ರಸ್ತುತರಾಗುತ್ತಾರೆ.

ಸಂಸರ ನಾಟಕಗಳ ಬಗೆಗೆ ಅಧ್ಯಯನ ಮಾಡ್ವುವ ಮೊದಲು ಅವರ ನಾಟಕಗಳು ಹುಟ್ಟಿಕೊಂಡ ಚಾರಿತ್ರಿಕ ಸ್ವರೂಪವನ್ನು ಅರ್ಥಮಾಡಿಕೊಳ್ಳಬೇಕು. ಇಲ್ಲಿ ಚರಿತ್ರೆ ಮತ್ತು ಸಾಹಿತ್ಯಗಳ ನಡುವಿನ ಸಂಬಂಧವನ್ನು ಖಚಿತಪಡಿಸಿಕೊಳ್ಳುವ ಅಗತ್ಯವಿದೆ.

ಸಾಹಿತ್ಯಕೃತಿಯಲ್ಲಿ ಚರಿತ್ರೆ ಎನ್ನುವುದು ಮುಖ್ಯವೇ ಅಲ್ಲ. ಇಲ್ಲಿ ಸಾಹಿತ್ಯ ಕೃತಿಯ ಅನನ್ಯತೆಯ ಪ್ರಶ್ನೆಬರುತ್ತದೆ. ಚರಿತ್ರೆಯೆಂದರೆ ಒಂದು ಕಾಲಕ್ಕೆ ಅದು ನಡೆದದ್ದು ನಿಜವಾಗಿರಬಹುದು ಆದರೆ ಅದೇ ಸರ್ವಕಾಲಿಕ ಸತ್ಯವಲ್ಲ. ಯಾಕೆಂದರೆ ಅದನ್ನು ನಾವು ಗ್ರಹಿಸುವುದು ಅವುಗಳ ಬಗೆಗೆ ಬಂದು ಹೇಳಿಕೆಗಳ ಮೂಲಕ. ಚರಿತ್ರೆಯನ್ನು ಉಲ್ಲೇಖಿಸುವ ಈ ಹೇಳಿಕೆಗಳೇ ಎಷ್ಟೋ ಬದಲಾವಣೆಯನ್ನು ಪಡೆದುಕೊಣ್ಡಿರುತ್ತವೆ. ಹಾಗಾಗಿ ನಾವು ಚರಿತ್ರೆಯನ್ನು ಇದ್ದ ಹಾಗೆ ಗ್ರಹಿಸುತ್ತೇವೆ. ಎನ್ನುವುದು ಕೂಡಾ ಮೂರ್ಖತನದ ಮಾತಾಗುತ್ತದೆ. ಆದರೆ ಆಧುನಿಕ ಬರಹಗಾರನೊಬ್ಬ ಚರಿತ್ರೆಗೆ ವರ್ತಮಾನದ ಮಾತುಗಳ ಮೂಲಕ ಹೊಸರೂಪ ಕೊಡುತ್ತಾನೆ. ಹೀಗಾಗಿ ಕಾಲಕಾಲಕ್ಕೆ ಚರಿತ್ರೆ ಬದಲಾವಣೆಯನ್ನು ಪಡೆದುಕೊಳ್ಳುವುದು ಅನಿವಾರ್ಯ. ಇದಕ್ಕೆ ಯಾರೂ ಆಶ್ಚರ್ಯಪಡಬೇಕಾಗಿಲ್ಲ. ಆಧುನಿಕ ಬರಹಗಾರನ ಮೂಲಕ ಚರಿತ್ರೆ ತನ್ನ ಮೂಲಸತ್ವವನ್ನು ಕಳಚಿಕೊಂಡು ವರ್ತಮಾನದ ನೆಲೆಯಲ್ಲಿ ನಿಂತುಬಿಡುತ್ತದೆ. ಇನ್ನೂ ಕೆಲವೊಮ್ಮೆ ಚರಿತ್ರೆಯನ್ನು ಹಾಗೆಯೇ ಇಟ್ಟುಕೊಂಡು ಅದಕ್ಕೆ ವರ್ತಮಾನದ ಘಟನೆಗಳನ್ನು, ಮಾತುಗಳನ್ನು ಅನ್ವಯಿಸಿ ನೋಡಲಾಗುತ್ತದೆ.

ಹೀಗಾಗಿ ಚರಿತ್ರೆಯೆಂದರೆ ಮಾನವಕುಲದ ಇತಿಹಾಸ. ಇಲ್ಲಿ ಚರಿತ್ರೆಯ ವ್ಯಕ್ತಿತ್ವಗಳು ಪ್ರತಿಪಾದಿಸುವ ಮೌಲ್ಯಗಳು ಮುಖ್ಯವಾಗುತ್ತವೆಯಷ್ಟೇ ಹೊರತು ಬರೇ ಅಂಕೆ-ಸಂಖ್ಯೆಗಳು. ಇಸವಿಗಳ, ಹುಟ್ಟು ಸಾವಿನ ವಿವರಗಳ ಚರಿತ್ರೆಯಲ್ಲ. ಒಂದು ನಾಟಕವಾದರೆ ಚಾರಿತ್ರಿಕ ಸಂಗತಿಗಳಿಂದ ರೂಪುಗೊಂಡ ನಾಟಕದಲ್ಲಿ ಕೂಡಾ ನಾಟಕೀಯ ಕ್ರಿಯೆಗಳೇ ಮುಖ್ಯವಾಗುತ್ತವೆ. ಚರಿತ್ರೆಯ ವ್ಯಕ್ತಿತ್ವಗಳ ಮೂಲಕ ಅದು ಆಧುನಿಕ ಮತ್ತು ಸಮಕಾಲೀನ ಮಾನವ ಸಮುದಾಯದ

ಗುಣಲಕ್ಷಣಗಳನ್ನು ಹೇಗೆ ಪ್ರತಿಬಿಂಬಿಸುತ್ತದೆ? ಎಂಬುದು ಇಲ್ಲಿ ಮುಖ್ಯವಾಗುತ್ತದೆ. ಈ ಕಾರಣದಿಂದ ಒಂದು ಚಾರಿತ್ರಿಕ ವಸ್ತುವನ್ನೊಳಗೊಂಡ ಕೃತಿಯನ್ನು ಕೂಡಾ ಇದೇ ನಿಟ್ಟಿನಲ್ಲಿ ಅರ್ಥೈಸಬೇಕಾಗುತ್ತದೆ. ಆ ಕೃತಿಯ ಉದ್ದೇಶ, ಆ ಕೃತಿ ಪ್ರತಿಪಾದಿಸುವ ಮೌಲ್ಯಗಳೇನು? ಮತ್ತು ಸಮಕಾಲೀನ ಗುಣಗಳಿಗೆ ಅದು ಹೇಗೆ ಹತ್ತಿರವಾಗಿದೆ? ಎನ್ನುವುದರ ಕಡೆಗೆ ನಮ್ಮ ಗಮನವಿರಬೇಕೆ ಹೊರತು ಅಲ್ಲಿ ನಿರೂಪಿತಗೊಂಡ ಚರಿತ್ರೆಗಲ್ಲ. ಸಾಹಿತ್ಯ ವಿಮರ್ಶಕನ ಅಂತಿಮ ನೋಟ ಕೃತಿಗಷ್ಟೇ ಮೀಸಲು ಹೊರತು ಚರಿತ್ರಗಲ್ಲ. ಈ ಪ್ರಸ್ತಾವನೆ ಸಂಸರ ನಾಟಕಗಳ ಚಾರಿತ್ರಿಕ ಸ್ವರೂಪವನ್ನು ಅರ್ಥಮಾಡಿಕೊಳ್ಳುವಾಗ ಮೇಲಿನ ಮಾತುಗಳನ್ನು ಗಮನದಲ್ಲಿ ಇಟ್ಟುಕೊಳ್ಳಬೇಕಾಗುತ್ತದೆ.

ಸಂಸರಿಗೆ ಕೂಡಾ ಚರಿತ್ರೆಯೆಂದರೆ ಮಾನವ ಕುಲದ ಇತಿಹಾಸ ಅವರು ತಮ್ಮ ನಾಟಕಗಳ ಮೂಲಕ ಪ್ರತಿಪಾದಿಸುವುದು ಆಧುನಿಕ ಮಾನವ ಸಮುದಾಯದ ವರ್ತನೆಗಳನ್ನು ಮನುಷ್ಯನ ದುಷ್ಟತನ ಮತ್ತು ಒಳ್ಳೆಯತನ ಈ ಎರಡೂ ವಿರೋಧ ದ್ವಂದ್ವಗಳ ನಡುವಿನ ಸಂಘರ್ಷ ಸಂಸರ ನಾಟಕದುದ್ದಕ್ಕೂ ಕಾಣಿಸುತ್ತದೆ. ಮನುಷ್ಯನ ಹಿಂಬದಿಯಲ್ಲಿಯೇ ನಡೆಯುವ ಕಾರಕಸ್ಥಾನಗಳನ್ನು ಅದು ಬಯಲಿಗೆಳೆಯುತ್ತದೆ. ಒಂದು ಕಡೆಯಿಂದ ವಿಪರೀತ ಸ್ವಾಮಿ ನಿಷ್ಠೆಯನ್ನು ಸಂಸರು ತೋರಿಸಿದರೂ ಅದರ ಹಿಂದಿನ ದೌರ್ಬಲ್ಯಗಳು, ವಿಲಾಸಿ ಜೀವನವನ್ನು ಹೀಗಳೆಯುವುದನ್ನು ಬಿಡುವುದಿಲ್ಲ ಹೀಗಾಗಿ ಕಾಲದ ದೃಷ್ಟಿಯಿಂದ ನೋಡಿದರೆ ಸಂಸರು ತಮ್ಮ ನಾಟಕಗಳ ಮೂಲಕ ಪ್ರತಿಪಾದಿಸುವ ಸಮಕಾಲೀನ ಗುಣಗಳು ಕನ್ನಡ ನಾಟಕ ಪರಂಪರೆಗೆ ಹೊಸದು. ಸಂಸರ ನಾಟಕಗಳಲ್ಲಿ ನಿರೂಪಿತಗೊಂಡ ಚಾರಿತ್ರಿಕ ಪ್ರಜ್ಞೆಯನ್ನು ಸ್ವಲ್ಪ ವಿವರವಾಗಿ ನೋಡಿದಾಗ ಕೆಲವು ಅಂಶಗಳು ತಿಳಿದುಬರುತ್ತವೆ.

ಸಂಸರ ನಾಟಕ ರಚನೆ ಕಾರ್ಯ ನಡೆದ್ದು ೨೦ನೆಯ ಶತಮಾನದ ಆರಂಭದಲ್ಲೆ ವಸಾಹತೀಕರಣಕ್ಕೊಳಪಟ್ಟ ಭಾರತ ದೇಶದಲ್ಲಿ ಸಂಸರು ಚರಿತ್ರೆಯ ಕಡೆಗೆ ಮುಖ ತಿರುಗಿಸಿದ್ದೇ ತುಂಬಾ ಸಹಜ ಮತ್ತು ಅನಿವಾರ್ಯ ಸಂಗತಿ. ಯಾಕೆಂದರೆ ಸ್ವಾತಂತ್ರ್ಯ ಸಂಗ್ರಾಮದ ಕಾವು ಇಡೀ ರಾಷ್ಟ್ರವನ್ನು ವ್ಯಾಪಿಸಿರುವ ಹೊತ್ತಿನಲ್ಲಿ ಸಮಕಾಲೀನ ಬರಹಗಾರನೊಬ್ಬ ಅದಕ್ಕೆ ಪ್ರತಿಕ್ರಿಯಿಸುವುದನ್ನು ಬಿಟ್ಟು ಚರಿತ್ರೆಯ ಕಡೆಗೆ ಮುಖ ಮಾಡಿರುವುದು ಆ ಕಾಲದ ವಿಶೇಷವಲ್ಲ. ಸಂಸರ ಈ ವಿಮುಖತೆಯನ್ನೇ ಅವರ ಹೇಡಿತನವೆಂದು ಭಾವಿಸಿದರೆ ತಪ್ಪಾಗುತ್ತದೆ. ಯಾಕೆಂದರೆ ಇದನ್ನು ಅರ್ಥಮಾಡಿಕೊಳ್ಳುವುದರಲ್ಲಿಯೇ ಸಂಸರ ಮಹತ್ವವಿದೆ.

೩.೨ ಸಂಸರ ನಾಟಕಗಳ ಚಾರಿತ್ರಿಕ ಹಿನ್ನೆಲೆ

ಸಂಸರ ನಾಟಕಗಳ ವಸ್ತು ೧೯ ನೆಯ ಶತಮಾನದಲ್ಲಿ ಹಳೆಯ ಮೈಸೂರನ್ನು ಆಳಿತ ಇಮ್ಮಡಿ ರಾಜ ಒಡೆಯರು, ತಿಮ್ಮರಾಜ ಒಡೆಯರು, ರಣಧೀರ ಇವರು ಸುತ್ತಲೇ ಇವರ ಆರು ನಾಟಕಗಳು ರೂಪಗೊಂಡಿವೆ. ರಣಧೀರ ಇವರ ನಾಟಕಗಳಲ್ಲಿ ಮೆರೆಯುವ ವ್ಯಕ್ತಿ. ರಣಧೀರ ಸಂಸರ ಆದರ್ಶ ಕೂಡಾ. ಆದುದರಿಮದ ಈತನ ಬಗೆಗೆ ಅವರು ಅತೀವ ಕಾಳಜಿ ತೋರುತ್ತಾರೆ ರಣಧೀರನ ಸುತ್ತ ನಡೆಯುವ ಕಾರಸ್ಥಾನಗಳನ್ನು ವಿವರಿಸುತ್ತಾರೆ ಆದರೆ ಸಂಸರು ಈ ರಾಜರ ಬಗ್ಗೆ ತೋರಿಸುವ ಸ್ವಾಮಿನಿಷ್ಠೆ ಸುಧಾರಣವಾದಿ ಪರಂಪರೆಯಿಂದ ರೂಪುಗೊಂಡಿದ್ದೆಂದು ಪ್ರಸನ್ನರು ಹೇಳುತ್ತಾರೆ. "ಸುಧಾರಣಾವಾದಿ ರಾಜಕೀಯ ಹಾಗೂ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ರೂಪುಗೊಂಡ ಹಳೆಯ ಮೈಸೂರಿನ ಲೇಖಕರಿಗೆ, ಸಜ್ಜನಿಕೆ, ಲಿಬರಲ್ ಧೋರಣೆ, ಉನ್ನತ ವಿದ್ಯಾಭ್ಯಾಸಗಳ ಜೊತೆ 'ಸ್ವಾಮಿನಿಷ್ಠೆ' ಯೂ ಸಾಂಸ್ಕೃತಿಕ ಬಳುವಳಿಯಾಗಿ ಬಂದಿದ್ದರೆ ಅದಕ್ಕೆ ಆಶ್ಚರ್ಯ ಪಡಬೇಕಾಗಿಲ್ಲ ಅಂತಹ ಲೇಖಕರ ಮೇಲೆ ವೃಥಾ ಆಕ್ರೋಶವನ್ನು ಪಡಬೇಕಾಗಿಲ್ಲ. ಹಳೇ ಮೈಸೂರಿನ ಈ ವಿಶೇಷ ಪರಿಸ್ಥಿತಿಯೊಟ್ಟಿಗೆ ಸ್ವಾತಂತ್ರ್ಯ ಪೂರ್ವದ ನವಚಿಂತಕರನ್ನು ಕಾಡಿದ ಬ್ರಿಟಿಷ್ ವಸಹತುಶಾಹಿಯ ಬಗೆಗಿನ ದ್ವಂದ್ವಾತ್ಮಕ ಸಂಬಂಧವೂ ಇವರನ್ನು ಕಾಡಿದೆ", ಪ್ರಸನ್ನರು ಸಂಸರ ಬರವಣೆಗೆಯನ್ನು ವಸಾಹತುಶಾಹಿಯ ಬಗ್ಗೆ ಅವರು ತೋರಿಸಿದ ಮೆದುತನದ ಧೋರಣೆಯೆಂದೇ ಹೇಳಿದರೂ ಇದರ ಹಿಂದೆ ಅಡಗಿರುವ, ಪ್ರಸನ್ನರು ಗುರುತಿಸದೇ ಇರುವ, ಇನ್ನೊಂದು ಸತ್ಯವನ್ನು ನಾವು ತಿಳಿದುಕೊಳ್ಳಬೇಕು ಅಂದರೆ ಇಲ್ಲಿನ ಮುಖ್ಯ ಪ್ರಶ್ನೆ ಎಂದರೆ ಸಂಸರು ೧೯ ನೆಯ ಶತಮಾನದ ಇತಿಹಾಸವನ್ನೆ ನಾಟಕದ ಮುಖ್ಯ ವಸ್ತುವಾಗಿ ಯಾಕೆ ಆರಿಸಿದರು ಎಂಬುದು? ಅದಕ್ಕೆ ಇದರ ನಂತರದ ಕಾಲಘಟ್ಟವನ್ನು ಗುರುತಿಸಬೇಕು. ೧೨ನೆಯ ಶತಮಾನದಲ್ಲಿ ಮೈಸೂರನ್ನು ಆಳಿದ್ದು ಹೈದರಾಲಿ ಮತ್ತು ಟಿಪ್ಪು. ಈ ಮುಸ್ಲಿಂ ರಾಜರುಗಳ ವಸಾಹತುಶಾಹಿಯ ವಿರುದ್ಧ ಉಗ್ರವಾಗಿ ಪ್ರತಿಭಟಿಸಿದರೂ ನಂತರ ಬಂದ ರಾಜವಂಶದವರು ಟಿಪ್ಪುವಿನ ಆಡಳಿತವನ್ನು ಆಂತರಿಕವಾಗಿ ವಿರೋಧಿಸಿ ಸುಧಾರನಾವಾದಿ ಪರಂಪರೆ ಬೆಳೆಯುವಂತೆ ಮಾಡಿದರು. ಮೈಸೂರನ್ನು ಆಳಿದ ಮುಸ್ಲಿಂ ವಂಶದ ಬಗ್ಗೆ ಮತ್ತು ವಸಾಹತು ಶಕ್ತಿಗೆ ಅಡಿಯಾಳಾಗಿದ್ದುಕೊಂಡು ಬಂದ ೧೮ ನೆಯ ಶತಮಾನದ ನಂತರದ ಮೈಸೂರಿನ ನಾಮಕಾವಸ್ತೆಯ ರಾಜರ ಬಗ್ಗೆ ಸಂಸರಿಗಿದ್ದ ಅನಾಸಕ್ತಿಯೇ ಅವರನ್ನು ೧೯ ನೆಯ ಶತಮಾನದತ್ತ ಮುಖ ತಿರುಗಿಸುವಂತೆ ಮಾಡಿತು ಎನ್ನಬಹುದು. ಇಲ್ಲಾವಾಗಿದ್ದರೆ ಅವರ ಕಾಲದಲ್ಲಿಯೇ ಮೈಸೂರನ್ನು ಆಳಿದ ಜಯಚಾಮರಾಜೇಂದ್ರ ಒಡೆಯರು ಕೂಡಾ ಅವರ

ನಾಟಕದೊಳಗೆ ಸ್ಥಾನ ಪಡೆಯುತ್ತಿದ್ದರು. ಹಾಗಿದ್ದರೂ ಸಂಸರು ತಮ್ಮ ನಾಟಕದ ವಸ್ತುವಿನ ಬಗೆಗೆ ವ್ಯಾಪಕವಾದ ಮಾಹಿತಿಯನ್ನು ಪಡೆದುಕೊಂಡಿದ್ದರು.

ಸಂಸರ ನಾಟಕಗಳು ವಸ್ತು ಹದಿನಾರನೆಯ ಶತಮಾನದ್ದು ಎಂದು ಹೇಳಿದ ಮೇಲೆ ಅದರ ಒಟ್ಟು ಲಕ್ಷಣವನ್ನು ಗಮನಿಸಬೇಕು. ಸಂಸರ ಕೆಲವು ನಾಟಕಗಳಲ್ಲಿ ಮುಖ್ಯವಾಗಿ ಕಾಣಿಸುವುದು ರಣಧೀರನ ಬಗೆಗೆ ಆಸಕ್ತಿ ಮತ್ತು ಆಗಿನ ಕಾಲದ ಪೊಳ್ಳು ಔನ್ನತ್ಯದ, ವಿಷಯಲಂಪಟರಾಗಿದ್ದ ಅರಸರ ಬಗೆಗಿನ ಅನಾಸಕ್ತಿ ಇವರ ನಾಟಕ್ಕದುದ್ದಕ್ಕೂ ಮೆರೆಯುವ ರಣಧೀರನ ನಿಜವಾದ ಹೆಸರು ಕಂಠೀರವ ನರಸರಾಜ ಒಡೆಯರು ಎಂದು —ಈತನು ಮೈಸೂರನ್ನು ಆಳಿದ್ದು ೧೬೩೮ ರಿಂದ ೧೬೫೯ ರವರೆಗೆ, ಈತನು ಬೆಟ್ಟದ ಚಾಮರಾಜ ಒಡೆಯರ ಪುತ್ರ, ಇವನ ಕತ್ತಿವರಸೆ ಮತ್ತು ದೈಹಿಕ ಬಲಶೌರ್ಯಗಳು ಜನಪ್ರೀಯ ಕತೆಗಳಾಗಿವೆ. ತಿರುಚನಾಹಳ್ಳಿಯ ಮಲ್ಲನನ್ನು ಸೋಲಿಸಿದ ಬಗೆಗೆ ಅನೇಕ ಇತಿಹಾಸಗಳು ಹೇಳುತ್ತವೆ. ಒಂದು ಕಡೆಯಿಂದ ಬಿಜಾಪುರ, ಗೋಲ್ಕೊಂಡ ಸುಲ್ತಾನರ ಉಪಟಳ, ಉತ್ತರದಿಂದ ಮೊಗಲರ ಪ್ರಭುತ್ವ ಒಂದು ಕಡೆಯಿಂದ ಕೆಳದಿಯ ನಾಯಕರ ದಂಗೆಯೇಳುವಿಕೆ, ಇದರ ನಡುವೆಯೂ ಯಶಸ್ವಿಯಾಗಿ ಕಾರ್ಯನಿರ್ವಹಿಸಿದವರು ಕಂಠೀರವ ನರಸರಾಜ ಒಡೆಯರು, ಈತನ ಕಾಲದಲ್ಲಿಯೇ ಹತ್ತು ಜನ ದಳವಾಯಿಗಳು ನೇಮಕರಾಗಿದ್ದರು.[?] ಎಂದರೆ ಅದು ಈತನಿಗೆ ಆಡಳಿತದಲ್ಲಿದ್ದ ಹತೋಟಿಯನ್ನು ಪ್ರಕಟಪಡಿಸುತ್ತದೆ. ರಣಧೀರ ಎನ್ನುವುದು ಇವರಿಗೆ ಸಿಕ್ಕ ಬಿರುದು, ಇಂತಹ ರಣಧೀರ ಸಂಸರ ಆದರ್ಶ ಪಾತ್ರ. ಹಾಗಾಗಿ ಒಂದು ಕಡೆಯಿಂದ ಸಂಸರು ಮೈಸೂರಿನ ಸಿಂಹಾಸನದ ಬಗೆಗೆ ಸ್ವಾಮಿನಿಷ್ಠೆ ತೋರಿದರೂ ಆದರ ದೌರ್ಬಲ್ಯಗಳನ್ನು ವಿಷಯಲಂಪಟತನವನ್ನು, ವಿಲಾಸಿ ಜೀವನವನ್ನು ಹಳಿಯಲು ಮರೆಯುವುದಿಲ್ಲ. ಮನುಷ್ಯನ ದುಷ್ಟತನ ಮತ್ತು ಒಳ್ಳೆಯತನಗಳ ನಡುವಿನ ಸಂಘರ್ಷ, ಅಧಿಕಾರಕ್ಕಾಗಿ ನಡೆಯುವ ಕಚ್ಚಾಟ ಇವುಗಳೇ ಇಲ್ಲಿ ಮುಖ್ಯವಾಗಿರುತ್ತದೆ. ಈ ದ್ವಂದ್ವಗಳೇ ವರ್ತಮಾನದ ದ್ವಂದ್ವಗಳು ಕೂಡಾ. ೧೬ ನೇಯ ಶತಮನಾದ ರಾಜರ ದೌರ್ಬಲ್ಯಗಳ ಮೂಲಕ ಸಂಸ ಹಳಿಯುವುದು ವರ್ತಮಾನದ ಸಮಾಜದ ವಿಕೃತಿಗಳನ್ನು ಈ ಅಧಿಪತ್ಯವನ್ನು ವಿರೋಧಿಸುವುದು ರಣಧೀರನ ಗಟರಟಿತನದ ಮೂಲಕ ಆಧುನಿಕ ಯುಗದಲ್ಲಿ ಅಧಿಕಾರಕಕ್ಕಾಗಿ ನಡಯುವ ಪೈಪೋಟಿಯನ್ನು ನೋಡುವುದು ಇತಿಹಾಸದ ಮೂಲಕ ಹೀಗಾಗಿ ಸಂಸರು ಚರಿತ್ರೆಯನ್ನು ಪರಿಷ್ಕಾರವನ್ನು ರಣಧೀರನ ಗಟ್ಟಿತನವನ್ನು ಏಕಕಾಲದಲ್ಲಿ ಪ್ರಕಟಪಡಿಸುತ್ತಾರೆ. ವಸಾಹತೀಕರಣಕ್ಕೆ ಪ್ರತಿಕ್ರಿಯೆಯನ್ನು ಸಂಸರು ಸೂಚಿಸುತ್ತಿರುವುದು ರಣಧೀರನ ಗಟ್ಟಿತನದ ಮೂಲಕ, ಹೀಗಾಗಿ ಸಂಸರು ಒಂದು ಕಡೆಗೆ

ಚರಿತ್ರೆಯ ಪರಿಷ್ಕಾರಗೊಳಿಸುವ ಕೆಲಸವನ್ನು, ಇನ್ನೊಂದು ಕಡೆಗೆ ಅದನ್ನು ಪುನಃ ನಿರ್ಮಿಸುವ ಕೆಲಸವನ್ನು ನಾಟಕದೊಳಗಡೆ ಏಕಕಾಲದಲ್ಲಿ ಮಾಡುತ್ತಾರೆ. ಇದೇ ಸಂಸರ ದ್ವಂದ್ವ ಕೂಡ ಆಗಿದೆ. ಸಂಸರ ದ್ವಂದ್ವಗಳೇ ನಾಟಕದೊಳಗಡೆ ಮೂಡಿಬಂದಿವೆಯೆಂದರೆ ತಪ್ಪಿಲ್ಲ.

ಸಂಸರ ನಾಟಕಗಳ ಬಂಧ ಮೇಲ್ನೋಟಕ್ಕೆ ಸರಳವೆಂದೇ ಭಾವಿಸಿದರೂ ಅದು ನಾವು ಊಹಿಸಿದಷ್ಟು ಸರಳವಲ್ಲ. ಅದು ಮೈಸೂರಿನ ಇತಿಹಾಸದ ಬಗೆಗೆ ಒಲವು ತೋರಿಸಿದರೂ ಅದರ ಹಿಂದೆ ರಾಜ ಸಿಂಹಾಸನಕ್ಕಾಗಿ ನಡೆಯುವ ಕಚ್ಚಾಟವನ್ನು, ಒಂದು ಸಮ್ಮುದಾಯದ ಒಳಗಡೆ ನಡೆಯುವ ಸಂಘರ್ಷವನ್ನು ಒಬ್ಬ ವ್ಯಕ್ತಿಯ ಹಿಂದೆ ನಡೆಯುವ ದುಷ್ಪಕಾರಸ್ಥಾನಗಳನ್ನು ಬಯಲಿಗೆಳೆಯುತ್ತದೆ. ಟಿ.ಪಿ. ಅಶೋಕ ಅವರು" ಸಂಸರ ರಾಜನಿಷ್ಠೆಯ ಸ್ವರೂಪ ತೀರಾ ಸಂಕೀರ್ಣವಾದದ್ದು, ಸಂಸರ ನಾಟಕಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದಾಗ ಅವುಗಳ ವಸ್ತು ರಾಜರಲ್ಲ. ರಾಜತ್ವ ಎಂಬುದು ತಿಳಿದು ಬರುತ್ತದೆ. ಸಿಂಹಾಸನ, ರಾಜತ್ವ ಅವರಿಗೆ ಪರಿಪೂರ್ಣತೆಯ ಆದರ್ಶ, ರಣಧೀರ ಕೂಡಾ ಅಂಥ ಒಂದು ಆದರ್ಶವೇ, ಹೀಗಾಗಿ ಸಂಸರ ನಾಟಕಗಳು ಕೇವಲ ಮೈಸೂರು ಮಹಾರಾಜರ ಕತೆಯಲ್ಲ ರಾಜತ್ವದ ಅಧ್ಯಯನ, ಈ ಆದರ್ಶದ ಸೃಜನ ಶೀಲ ಶೋಧನೆಯಲ್ಲಿ ಸಂಸರ ನಾಟಕಗಳು ನಾಟಕಕಾರನ ವೈಯಕ್ತಿಕ ಆಶಯಗಳನ್ನು ಮೀರಿಬೆಳೆಯುತ್ತವೆ. ಎಂದು ಹೇಳುತ್ತಾರೆ. ಆಧುನಿಕ ವ್ಯವಸ್ಥೆಯೊಳಗಿನ್ನ ಅನೇಕ ಸ್ಥಿತಿಗತಿಗಳನ್ನು ಪ್ರಕಟಪಡಿಸುವುದರೊಂದಿಗೆ ಅದರ ಮೂಲಕ ಹೊಸ ಆದರ್ಶವೊಂದನ್ನು ಮೂರ್ತಗೊಳಿಸುವ ಕ್ರಿಯೆಯ ಕಡೆಗೆ ಸಂಸರ ಕೇಂದ್ರ ಪ್ರಜ್ಞೆ ಕೆಲಸ ಮಾಡುವುದು ಕಂಡು ಬರುತ್ತದೆ.

ಸಂಸರಿಗೆ ಚರಿತ್ರೆಯನ್ನು ದಾಖಲಿಸುವುದು ಮಾತ್ರ ಮುಖ್ಯವಲ್ಲ. ಚರಿತ್ರೆಯನ್ನು ಸಂಸರು ಆರಾದಿಸುವುದೂ ಇಲ್ಲ. ಅವರು ಬಯಲಿಗೆಳೆಯುವುದು ಚರಿತ್ರೆಯ ದೌರ್ಬಲ್ಯಗಳನ್ನು, ಚರಿತ್ರೆ ಎನ್ನುವುದು ಅವರಿಗೆ ವರ್ತಮಾನದ ಗೊಂದಲಗಳನ್ನು, ದೌರ್ಬಲ್ಯಗಳನ್ನು ನಿರೂಪಿಸಲು ಬಳಸಿಕೊಂಡ ಸಾಧನ ಮಾತ್ರ ಅದೊಂದು ಮಾಧ್ಯಮ ಕೂಡಾ "ಅವನತಮುಖೀ ಸಮಾಜದಲ್ಲಿ ಅಪ್ಪಟ ಮೌಲ್ಯಗಳಿಗಾಗಿ ಹುಡುಕಾಟ" ಎಂದು ಕಾದಂಬರಿಗಳ ಬಗೆಗೆ ಲುಕಾಕ್ಸ್ ಹೇಳುವ ಮಾತನ್ನು ಸಂಸರಿಗೂ ಅನ್ವಯಿಸಬಹುದೆಂದೆನಿಸುತ್ತದೆ. ಯಾಕೆಂದರೆ ಸಂಸರೂ ಕೂಡಾ ಅನ್ವೇಷಿಸುವುದು ಕೆಟ್ಟುಹೋದ ಚರಿತ್ರೆಯಲ್ಲಿ ಅದಕ್ಕೆ ಪರ್ಯಾಯವಾದ ಒಂದು ಆದರ್ಶವನ್ನು ಹಾಗಾಗಿಯೇ ಸಂಸರ ಒಲವು ರಣಧೀರನ ಮೇಲೆ ಆದರೆ ಅವರ ಸಂಶಯಗ್ರಸ್ತ ಕಣ್ಣು ಕೆಲವೊಮ್ಮೆ ರಣಧೀರನನ್ನೂ ಅನುಮಾನದಿಂದ ನೋಡದೆ ಬಿಡುವುದಿಲ್ಲ. ರಣಧೀರನ ಮೂಲಕ ಅವರು ತೋರಿಸುವುದು ವಸಾಹತೀಕರಣಕ್ಕೆ ತೀವ್ರವಾದ ಪ್ರತಿಕ್ರಿಯೆಯನ್ನು ಹಾಗಾಗಿ ಮೇಲ್ನೋಟಕ್ಕೆ

ಇಲ್ಲಿ ಎರಡು ಶಕ್ತಿಗಳ ಮುಖಾಮುಖಿ ಮಾತ್ರ ಕಂಡುಬಂದರೂ ಅದು ಪ್ರಸ್ತುತಪಡಿಸುವುದು ಮಾನವ ಕುಲದ ಇತಿಹಾಸವನ್ನು ಈ ಮಾತನ್ನು ಹೇಳುವಾಗ ಪೀಟರ್ ಬ್ರೂಕ್ ನೆನಪಾಗುತ್ತಾರೆ.

ಆತನಿಗೂ ಕೂಡಾ ಮಹಾಭಾರತವೆಂದರೆ ಮಾನವ ಕುಲದ ಇತಿಹಾಸ ಹಾಗಾಗಿಯೇ ಆತ ಮಹಾಭಾರತದ ಪಾತ್ರಗಳನ್ನು ಬೇರೆ ಬೇರೆ ದೇಶದ ಬೇರೆ ಬೇರೆ ಜನಾಂಗದ ವ್ಯಕ್ತಿಗಳ ಮೂಲಕ ಕಂಡುಕೊಂಡ ಇವುಗಳ ಮೂಲಕ ಆತ ಪ್ರತಿಪಾದಿಸುವುದು ವರ್ತಮಾನದ ಮನುಷ್ಯನ ವಿವಿಧ ಸ್ವಭಾವಗಳನ್ನು "ಸಂಸರ ನಾಟಕಗಳು ಕ್ಯಾನ್‌ವಾಸಿನ ಮೇಲೆ ಮ್ಲೂಡಿರುವು ಭವ್ಯ ಕಲಾಕೃತಿಗಳಂತೆ ಕಾಣುತ್ತವೆ. ಸಂಸರು ತಮ್ಮ ಎಲ್ಲಾ ನಾಟಕಗಳಿಗೂ ಮೈಸೂರಿನ ಇತಿಹಾಸವನ್ನೇ ವಸ್ತುವನ್ನಾಗಿ ಆಯ್ಕೆ ಮಾಡಿಕೊಂಡಿರುವುದು ನಿಜ. ಆದರೆ ಇಲ್ಲಿ ಎಷ್ಟೋ ಬಗೆಯ ಪಾತ್ರಗಳ ಬರುತ್ತವೆ. ಶೂರರು, ಕುತಂತ್ರಿಗಳು, ಶಿಷ್ಯರು, ಲಂಪಟರು, ಸೂಳೆಯರು, ರಾಣಿಯರು, ವರ್ತಕರು ಹೀಗೆ ಒಂದು ದೊಡ್ಡ ಸಮೂಹವೇ ಸಂಸರ ನಾಟಕಗಳಲ್ಲಿ ಬರುತ್ತದೆ. ಒಂದು ಕಾಲದ ಸಾಮಾಜಿಕ ಸ್ಥಿತಿಗತಿಗಳ ಚಿತ್ರಣನ ಸಂಸರ ನಾಟಕಗಳಲ್ಲಿರುವಂತೆ ಸಮಕಾಲಿನ ಬದುಕಿನ ವಾಸನೆಯೂ ನಮ್ಮ ಮೂಗಿಗೆ ಬಡಿಯುತ್ತದೆ.

ಒಟ್ಟು ಕನ್ನಡ ನಾಟಕ ಪರಂಪರೆಯ ದೃಷ್ಟಿಯಿಂದ ನೋಡಿದರೆ ಸಂಸರು ನಡೆದ ಹಾದಿ ವಿಶಿಷ್ಟವಾದದ್ದು, ಉಳಿದ ನಾಟಕಕಾರರು ಸಾಮಾಜಿಕ ವಿಡಂಬನೆಯ್ನನೇ ಮುಖ್ಯವಾಗಿಟ್ಟುಕೊಂಡು ಬರೆದರು ಸಂಸರು ವರ್ತಮಾನದ ಬದುಕಿನ ಸೂಕ್ಷ್ಮಗಳನ್ನು ಕಂಡುಕೊಂಡದ್ದು ಇತಿಹಾಸದ ತೆಕ್ಕೆಯಲ್ಲಿ ನಾಟಕದ ಬಂದ ಆಶೆಯಗಳ ದೃಷ್ಟಿಯಿಂದ ನೋಡಿದಾಗಲೂ ಸಂಸರು, ಕೈಲಾಸಂ ಮತ್ತು ಶ್ರೀರಂಗರಿಗಿಂತ ಹೆಚ್ಚು ಪ್ರಮುಖರಾಗುತ್ತಾರೆ. ಕೈಲಾಸಂ ನಾಟಕದ ಬಂಧವೇ ತುಂಬಾ ಸರಳವಾದದ್ದು, ಅಲ್ಲಿ ಸಿಗುವುದು ಟೈಪ್ಸ್‌ಗಳು ಮಾತ್ರ. ಅದು ಬೇರೆ ಯಾವ ಅರ್ಥವನ್ನೂ ಪಡೆದುಕೊಂಡಿಲ್ಲ. ಶ್ರೀರಂಗರ ನಾಟಕಗಳು ಸೋಲುವುದು ಬಿಗಿ ವೈಚಾರಿಕತೆ ಮತ್ತು ವಾಚಾಳಿತನದಿಂದ ಆದರೆ ಸಂಸರ ನಾಟಕಗಳಲ್ಲಿ ವಾಚಾಳಿತನ ಮತ್ತು ಕ್ಲಿಷ್ಟತೆ ಅಧಿಕವಾಗಿದ್ದರೂ ಅದನ್ನು ಮರೆತುಬಿಡಬೇಕಾಗುತ್ತದೆ. ಕೈಲಾಸಂ ಮತ್ತು ಶ್ರೀರಂಗರು ಹೇಳುವ ಸಮಸ್ಯೆಗಳು ಒಂದು ಕಾಲಕ್ಕೆ ಮಾತ್ರ ಸೀಮಿತಿವಾದವು. ಆದರೆ ಸಂಸರು ನಾಟಕದಲ್ಲಿ ಪ್ರಸ್ತುತ ಪಡಿಸುವ ರಾಜಕೀಯ ಸಂಘರ್ಷ ಎಲ್ಲಾ ಕಾಲದಲ್ಲೂ ಇರುವಂತಹುದು. ಸಂಸರನ್ನು ಉಳಿದ ನಾಟಕಕಾರರೊಡನೆ ಸಮೀಕರಿಸುತ್ತಾ ಬಿ.ಪಿ. ವೈಕುಂಟರಾಜು ಹೇಳುವ ಮಾತುಗಳು ಹೀಗಿವೆ. "ಇನ್ನು ಒಂದು ಶತಮಾನದ ಮೇಲೆ ಕೈಲಾಸಂ ಮತ್ತು ಶ್ರೀರಂಗರು ಎಷ್ಟು ಪ್ರಸ್ತುತವಾರುತ್ತಾರೆ ಎಂದುಹೇಳುವುದು

ಕಷ್ಟ" ಆದರೆ ಸಂಸರು ಒಂದು ಶತಮಾನದ ನಂತರವೂ ಈಗಿನಷ್ಟೆ ಪ್ರಸ್ತುತರಾಗಿರುತ್ತಾರೆ. ಅದಕ್ಕೆ ಕಾರಣ ಸಂಸರ ನಾಟಕಗಳ ಗಟ್ಟಿತನ.

ಸಂಸರು ಒಂದು ಸಂಪ್ರದಾಯವನ್ನು ನಿರ್ಮಿಸಲಿಲ್ಲ. ಎಂದು ಕೆಲವು ಆಪಾದನೆಗಳು ಇವೆ. ಆದರೆ ಸಂಸರು ಒಂದು ಪರಂಪರೆಯನ್ನು ನಿರ್ಮಿಸಿಲ್ಲದಿರಬಹುದು. ಆದರೆ ಅವರು ತೋರಿಸಿಕೊಟ್ಟ ಹಾದಿ ವಿಶಿಷ್ಟವಾದುದು ಎಂಬುದನ್ನು ಒಪ್ಪಲೇಬೇಕು. ಆದರೆ ಉಳಿದವರು ಆ ಹಾದಿಯನ್ನು ಹಿಡಿಯದಿರಲು ಮುಖ್ಯ ಕಾರಣ ಸಂಸರು ನಾಟಕಗಳ ಜಟಿಲತೆ, ಇತಿಹಾಸವನ್ನು ಕರಗಿಸಿ ಪುನರ್‌ನಿರ್ಮಿಸುವ ಕ್ರಿಯೆ ಉಳಿದವರಿಗೆ ಸಾಧ್ಯವಾಗಲಿಲ್ಲವೇನೋ? ಆದರೆ ನವ್ಯ ಸಂಪ್ರದಾಯದಲ್ಲಿ ಬಂದ ಗಿರೀಶ್ ಕಾರ್ನಾಡ, ಎಚ್.ಎಸ್. ಶಿವಪ್ರಕಾಶ ಮುಂತಾದವರು ಸಂಸರು ನಡೆದ ದಾರಿಯ ಉತ್ತರಾಧಿಕಾರಿಗಳಂತೆ ತೋರುತ್ತಾರೆ ಇವರ ನಾಟಕಗಳ ತಾತ್ವಿಕತೆಯಲ್ಲಿ ಭಿನ್ನತೆಯಿದೆ ನಿಜ, ಆದರೆ ಇವರು ಸಂಸರಿಗೆ ಕೃತಾರ್ಥರಾಗಿರಲೇಬೆಕು,. ಈ ನಾಟಕಕಾರಿಗೆ ಲಭ್ಯವಾಗಿದ್ದ ಆಧುನಿಕ ದೃಷ್ಟಿಕೋನಗಳು ಸಂಸರು ಬರೆದ ಹೊತ್ತಿನಲ್ಲಿ ಲಭ್ಯವಾಗಿಲ್ಲದಿದ್ದಾಗ್ಯೂ ಸಂಸರು ನಾಟಕಗಳಲ್ಲಿ ತೋರಿಸಿದ ಹೊಸತನ ಕನ್ನಡ ನಾಟಕ ಪರಂಪರೆಯಲ್ಲಿ ಅಪ್ಪಯಾಯಮಾನದಾದದ್ದು, ಎನ್ನುವುದನ್ನು ಒಪ್ಪಲೇಬೇಕಾಗುತ್ತದೆ. ಮತ್ತು ಕೈಲಾಸಂ ಕನ್ನಡ ನಾಟಕ ಸಾಹಿತ್ಯದ ಆರಂಭಕಾರ ಎನ್ನುವ ಮಾತು ಚಾರಿತ್ರಿಕವಾಗಿ ಸತ್ಯವಾದರೂ ಕನ್ನಡ ಸಣ್ಣಕತೆಗಳಿಗೆ ಮಾಸ್ತಿಯವರು ಹೇಗೆ ಆರಂಭಕಾರಗೋ ಹಾಗೆ ಕನ್ನಡ ನಟಕ ರಚನೆಯ ಆರಂಭಕಾರರು ಸಂಸರೇ ಎಂದು ಹೇಳಲೇಬೇಕಾಗುತ್ತದೆ.

# ಅಧ್ಯಾಯ–೪

## ಕಿ.ರಂ ಮತ್ತು ಎಂ.ಎಸ್.ಆಶಾದೇವಿಯವರ ಸಂದರ್ಶನ

ಬರೆದಿದ್ದರೆ ಹಲವು ಸಂಪುಟಗಳ ಬರವಣಿಗೆ ಇವರದಾಗುತ್ತಿತ್ತು. ಆದರೆ ಇವರು ಮೌಖಿಕ ಪರಂಪರೆಯ ಹರಿಕಾರನಾಗಿಯೇ ಉಳಿದು ಅಕ್ಷರಶಃ ಕಾವ್ಯಜಂಗಮರೇ ಆದವರು. ಕಾವ್ಯವು ಇವರಿಗೆ ಆಸಕ್ತಿಯ, ಪ್ರೀತಿಯ ಒಂದು ಕ್ಷೇತ್ರ ಮಾತ್ರವಾಗಿರಲಿಲ್ಲ. ಕಾವ್ಯ ಮತ್ತು ಬದುಕು ಎರಡನ್ನೂ ಕಿ.ರಂ. ಬಹುಶಃ ಎಂದೂ ಬೇರೆ ಬೇರೆಯಾಗಿ ನೋಡಲೇ ಇಲ್ಲ.

ಕಿ.ರಂ. ಅವರ ಕಾವ್ಯದ ಓದಿನ ಕ್ರಮದ ಬಗ್ಗೆ ಕೆಲವು ಪ್ರಶ್ನೆಗಳಿವೆ. ಕಾವ್ಯವೊಂದನ್ನು ಪರಸ್ಪರ ವಿರುದ್ಧ ನೆಲೆಗಳಲ್ಲಿ ಏಕೋತ್ಸಾಹದಲ್ಲಿ ಚರ್ಚಿಸುತ್ತಿದ್ದ ಕಿ.ರಂ. ಕಾವ್ಯದ ಗ್ರಹಿಕೆಯಲ್ಲಿ ಅನಿವಾರ್ಯವೆಂದೇ ತಿಳಿಯಲಾದ 'ವಿಸರ್ಜನ' ಕ್ರಮದ ಬದ್ಧ ವಿರೋಧಿಯಂತೆ ಕಾಣಿಸುತ್ತಾರೆ. ಒಂದು ದಾರಿಯಲ್ಲಿ ಕಾವ್ಯವೊಂದನ್ನು ಚರ್ಚಿಸುತ್ತಲೇ ಅದರ ಕ್ಲೈಮ್ಯಾಕ್ಸ್‌ನಲ್ಲಿ ಇನ್ನೊಂದು ದಿಕ್ಕಿಗೆ ಚರ್ಚೆಯನ್ನು ಹೊರಳಿಸುತ್ತಿದ್ದ ಕಿ.ರಂ. ಪ್ರಾಯಶಃ ಕಾವ್ಯವೊಂದು ಕೊಡಬಹುದಾದ ಯಾವುದನ್ನೂ ಎಷ್ಟು ಮಾತ್ರಕ್ಕೂ ಕಳೆದುಕೊಳ್ಳಬಾರದು ಎನ್ನುವ ತಹತಹದಲ್ಲಿದ್ದಂತೆ ಕಾಣಿಸುತ್ತಾರೆ. ಈ ತವಕ–ತಲ್ಲಣವು ಕಾವ್ಯದ ಓದು ಮತ್ತು ಲೋಕದ ಓದು ಬೇರೆಬೇರೆಯಲ್ಲ ಎನ್ನುವ ಗ್ರಹಿತದಿಂದ ಹೊರಟದ್ದು. ಅವರ ಕಾವ್ಯ ವ್ಯಾಖ್ಯಾನವಾದರೂ ಏಸ್ತೆಟಿಕ್ ಮತ್ತು ಸಮುದಾಯದ ಎಲ್ಲ ಮೂರ್ತ, ಅಮೂರ್ತ ಸವಾಲು ಬಿಕ್ಕಟ್ಟುಗಳ ನೋವು ನಲಿವುಗಳ ವಿಸ್ತಾರದಲ್ಲಿ ಕಟ್ಟಿಕೊಂಡದ್ದೇ ಆಗಿತ್ತು. ಆದ್ದರಿಂದಲೇ ಕಾವ್ಯಮೀಮಾಂಸೆ ಕುರಿತ ಕಿ.ರಂ. ಅವರ ಪರಿಕಲ್ಪನೆಯ ಬಗ್ಗೆ ಮಾತಾಡುವುದೆಂದರೆ ಅದು ಅವರು ರುಪಿಸಲು ಪ್ರಯತ್ನಿಸಿದ ಸಮುದಾಯ ಮೀಮಾಂಸೆಯ ಬಗ್ಗೆ ಮಾತನಾಡುವುದೇ ಆಗಿದೆ. ಇವರ ಸಮುದಾಯ ಮೀಮಾಂಸೆಯ ಸಾಮಾಜಿಕ ನ್ಯಾಯ, ಪರಿಸರ ಪ್ರಜ್ಞೆ ಎಲ್ಲ ಜೀವಿಗಳಲ್ಲೂ ಹುದುಗಿದೆ ಎಂದು ತಿಳಿದ ಸೌಂದರ್ಯ ಮತ್ತು ಕಲಾ ಪ್ರಜ್ಞೆ ಇವೆಲ್ಲವುಗಳನ್ನು ಒಳಗೊಂಡಿದೆ. ಪಂಪನ ಕಾವ್ಯವನ್ನು ಶ್ರದ್ಧೆಯಿಂದ ಚರ್ಚಿಸುತ್ತಿರುವಾಗಲೂ ಮನೆಯ ಮುಂದೆ ಹಾದು ಹೋಗುತ್ತಿರುವ ಚಿಂದಿ ಆಯುವ ಹುಡುಗನ ಬಗೆಗಿನ ಕಾಳಜಿಯನ್ನು ವಹಿಸಬಲ್ಲವರಾಗಿದ್ದರು ಎನ್ನುವುದು ಕಿ.ರಂ ಅವರ ಸಮುದಾಯ ಮೀಮಾಂಸೆಯನ್ನು ಕುರಿತ ಒಂದು ಸೂಚನೆ. ಸಮುದಾಯದ ಅನೇಕ ಕ್ಷೇತ್ರಗಳ ಬಗೆಗೆ ಕ್ರೀಡೆ, ರಾಜಕಾರ್ಣ, ಜಾತ್ರೆ, ಹಬ್ಬ ಹರಿದಿನಗಳು, ಅಡಿಗೆ, ಹೋಟೆಲುಗಳು, ಪುಸ್ತಕದಂಗಡಿಗಳು ಎಲ್ಲವೂ ಅವರಿಗೆ ಸಮಾನ ರ್ಚೆಯ ಸಂಗತಿಗಳು ಮಾತ್ರವಲ್ಲ, ಅವರು ಅಧಿಕೃತ ವಕ್ತಾರರೂ ಆಗಿದ್ದರು. ಸಮುದಾಯ ಸೌಷ್ಟವ ಮತ್ತು ಸೌಂದರ್ಯ ಎರಡನ್ನೂ ಸಾಮಾಜಿಕ ನ್ಯಾಯದ ಬೆಂಬಲದಲ್ಲಿ

ಕಟ್ಟಲು ಹೊರಟ ಕಿ.ರಂ. ಅವರ ಸಮುದಾಯ ಮೀಮಾಂಸೆಯನ್ನು ಗಂಭೀರವಾಗಿ ಚರ್ಚಿಸುವ ಪ್ರಯತ್ನಗಳು ಇನ್ನೂ ನಡೆಯಬೇಕಾಗಿದೆ. ಕಾವ್ಯದ ಸದ್ಯತನ ಮತ್ತು ವರ್ತಮಾನದ ಅಗತ್ಯಗಳನ್ನು ಕಿ.ರಂ.ಗೆ ಕಾವ್ಯದ ಏಸ್ತೆಟಿಕ್ಸ್‌ನ ಚರ್ಚೆಯಷ್ಟೇ ಮುಖ್ಯವಾಗಿತ್ತು. ದಟ್ಟ ಎಡಪಂಥೀಯ ರಾಜಕೀಯ ನಿಲುವುಗಳು ಇವರ ಕಾವ್ಯ ಮತ್ತು ಬದುಕಿನಗ್ರಹಿಕೆಯನ್ನು ರೂಕ್ಷಗೊಳಿಸಲೂ ಇಲ್ಲ, ಸೀಮಿತಗೊಳಿಸಲೂ ಇಲ್ಲ. ಬದಲಿಗೆ ತಾನು ಬದುಕುತ್ತಿರುವ ಪರಿಸರವನ್ನು ಅದರೆಲ್ಲ ಸೂಕ್ಷ್ಮಗಳಲ್ಲಿ, ಅಪ್ರಿಯ ಸತ್ಯಗಳಲ್ಲಿ ಒಳಹೋಗುವ, ಶೋಧಿಸುವ ಬೌದ್ಧಿಕ ಖಾಚಿತ್ಯವನ್ನು ಇದು ಒದಗಿಸಿಕೊಟ್ಟಿತು.

ಕಿ.ರಂ. ಅವರ ಜೊತೆ ಹಲವು ಸಂದರ್ಭಗಳಲ್ಲಿ ನಡೆಸಿದ ಮಾತುಕತೆಯ ಬರಹರೂಪ ಇಲ್ಲಿದೆ ;

ಆಶಾ : ವಿಮರ್ಶೆಯ ಎಲ್ಲಾ ಪ್ರಸ್ಥಾನಗಳಲ್ಲೂ ಅಪಾರ ಪರಿಶ್ರಮವಿರುವವರು ನೀವು, ಇಷ್ಟಾಗಿಯೂ ಒಂದು ವಿಮರ್ಶಾ ಪಂಥವನ್ನು ನೀವು ಆತ್ಯಂತಿಕವಾಗಿ ನೆಚ್ಚಿದವರಲ್ಲ. ಮೂಲತಃ ನಿಮ್ಮ ಒಲವು ಅಭಿರುಚಿ ನಿರ್ಮಾಣದ ಹಾಗೂ ಸಂಸ್ಕೃತಿ ವಿಮರ್ಶೆಯ ಕಡೆಗಲ್ಲವೆ ? ಅಥವಾ ಇದನ್ನು ರಸಾಸ್ವಾದಿ ವಿಮರ್ಶೆಯ ಒಲವು ಎಂತಲೂ ಕರೆಯಬಹುದೆ ?

ಕಿ.ರಂ : ಬಹಳ ನೇರವಾಗಿ ಹೇಳಬೇಕು ಅಂದರೆ, ಕನ್ನಡದಲ್ಲಿ ರಸಾಸ್ವಾದಿ ವಿಮರ್ಶಾ ಪಂಥ ಅನ್ನೋದು ಚಾಲ್ತಿಯಲ್ಲಿದ್ದದ್ದು ಬಹಳ ಹಿಂದೆ, ಸುಮಾರು ೫೦ ರ ದಶಕದ ಮಧ್ಯಭಾಗದ ತನಕ ಈ ಪಂಥ ಮುಖ್ಯವಾಗಿತ್ತು. ಆದರೆ ೬೦ ರ ದಶಕದಿಂದೀಚೆಗೆ ಬೇರೆ ಬೇರೆ ಪಂಥಗಳು ಕನ್ನಡದಲ್ಲಿ ತುಂಬ ಕ್ರಿಯಾಶೀಲವಾದವು. ಸಾಮಾಜಿಕ ವಿಮರ್ಶೆ, ರೂಪನಿಷ್ಠ ವಿಮರ್ಶೆ, ಪ್ರತೀಕಾತ್ಮಕ ವಿಮರ್ಶೆ, ಮಾರ್ಕ್ಸ್‌ವಾದಿ ವಿಮರ್ಶೆಯ ಪಂಥ, ಹೀಗೆ ಮುಖ್ಯವಾಗಿ ಈ ಎಲ್ಲಾ ಪ್ರಸ್ಥಾನಗಳು ಒಂದು ರೀತಿಯಲ್ಲಿ ಐರೋಪ್ಯ ವಿಮರ್ಶಾ ಚಿಂತನೆಗಳ ವಿವರಗಳನ್ನು ಆಧಾರವಾಗಿಟ್ಟುಕೊಂಡು ರೂಪಿತವಾದವು.

ಹಾಗೆಯೇ ಇವತ್ತು ನಾವು ಬಳಸುತ್ತಿರುವ ಸಂಸ್ಕೃತಿ ವಿಮರ್ಶೆಯೂ ಈ ನಮ್ಮ ಕಾಲಘಟ್ಟದಲ್ಲಿಯೇ ರೂಪಿತವಾದದ್ದು ಎಂದೂ ನಾವು ತಿಳಿಯಬಾರದು. ಸಂಸ್ಕೃತಿ ವಿಮರ್ಶೆ ಅನ್ನೋದು ೨೦ನೇ ಶತಮಾನದ ಡಿಸಿಪ್ಲಿನ್ ಇರಬಹುದು. ಆದರೆ ಅದಕ್ಕೆ ೧೦೦೦ ವರ್ಷಗಳ ಇತಿಹಾಸ ಇದೆ. ಹಾಗೆ ನೋಡೀದರೆ ಎಲ್ಲಾ ವಿಮರ್ಶೆಯ ವಿವೇಕವೂ ಸಂಸ್ಕೃತಿ ವಿಮರ್ಶೆಯೇ ಅಲ್ಲವೆ? ನಮ್ಮ ಎಲ್ಲ ಮುಖ್ಯ ವಿಮರ್ಶಕರೂ ಸಂಸ್ಕೃತಿ ವಿಮರ್ಶಕರೆಂದೇ ನಾನು ತಿಳಿಯುತ್ತೇನೆ.

ಮುಳಿಯ ತಿಮ್ಮಪ್ಪಯ್ಯ, ಬೇಂದ್ರೆ, ಕುರ್ತಕೋಟಿ, ಕೆ.ವಿ.ಸುಬ್ಬಣ್ಣ, ಅನಂತಮೂರ್ತಿ, ಲಂಕೇಶ್, ಕೆ.ವಿ.ನಾರಾಯಣ, ಡಿ.ಆರ್.ನಾಗರಾಜ್, ಬಸವರಾಜ ಕಲ್ಗುಡಿ, ರಾಜೇಂದ್ರ ಚೆನ್ನಿ, ಶಿವಪ್ರಕಾಶ ತನಕ. ಅಷ್ಟೇ ಅಲ್ಲ ಶಿ.ಶಿ.ಬಸವನಾಳರು ವಚನಗಳ ಬಗ್ಗೆ ನಡೆಸಿದ ಅಧ್ಯಯನದಲ್ಲಿಯೂ ಶಂ.ಬಾ.ಜೋಷಿಯವರ ಸಂಸ್ಕೃತಿ ಕೇಂದ್ರಿತ ಚಿಂತನೆಯಲ್ಲಿಯೂ ನಾನು ಸಂಸ್ಕೃತಿ ವಿಮರ್ಶಾ ಪರಂಪರೆಯೊಂದನ್ನು ಗುರುತಿಸಿಕೊಳ್ತೀನಿ.

ಸಂಸ್ಕೃತಿ ವಿಮರ್ಶೆ ಅನ್ನೋದನ್ನು ಇನ್ನೂ ವಿಸ್ತಾರವಾದ ನೆಲೆಯಲ್ಲಿಯೂ ನಾವು ಗುರುತಿಸಿಕೊಳ್ಳಬಹುದು. ಸಮುದಾಯದ ಎಲ್ಲಾ ಜೀವದ್ರವ್ಯಗಳೂ ಸಂಸ್ಕೃತಿ ವಿಮರ್ಶೆಯನ್ನು ರೂಪಿಸುತ್ತಿರುತ್ತವೆ. ಪಂಪನನ್ನೋ, ರಾಘವಾಂಕನನ್ನೋ, ಲಕ್ಷ್ಮೀಶನನ್ನೋ ಒಂದು ಪೀಳಿಗೆ ಗ್ರಹಿಸಿ, ಅನುಭವಿಸಿ ಇನ್ನೊಂದು ಪೀಳಿಗೆಗೆ ಕಳುಹಿಸುತ್ತಿರುತ್ತದೆ. ಅಂದರೆ, ಕಾಲದ ಅಂತರದಲ್ಲಿ ಕೃತಿಯೊಂದು ಒಳಗಾಗುವ ಓದಿನ ಪ್ರಕ್ರಿಯೆಯೇ ಮೂಲತಃ ಸಂಸ್ಕೃತಿ ವಿಮರ್ಶೆ. ಇದು ವಿಭಿನ್ನ ಅಭಿರುಚಿಗಳನ್ನು ನಿರಂತರವಾಗಿ ರೂಪಿಸುತ್ತಲೇ ಇರುತ್ತದೆ.

ಆಶಾ : ಅಭಿರುಚಿ ಮತ್ತು ಸಂವೇದನೆಗಳಲ್ಲಿನ ಬದಲಾವಣೆಗಳನ್ನು ಪ್ರಭಾವಿಸುವ ಅಂಶಗಳು ಯಾವುವು ?

ಕಿ.ರಂ : ನಮ್ಮ ಕಾಲ. ಪರಿಸರಗಳು, ನಮ್ಮ ಸಂದರ್ಭದ, ತುರ್ತುಗಳು ನಮ್ಮ ಅಭಿರುಚಿಯನ್ನು ರೂಪಿಸುತ್ತಾ ಇರುತ್ತವೆ. ಉದಾಹರಣೆಗೆ ಸ್ತ್ರೀಕೇಂದ್ರಿತ, ದಲಿತಕೇಂದ್ರಿತ ಓದುಗಳು ಇವತ್ತು ಮುಖ್ಯವಾಗ್ತಾ ಇವೆ. ನಮ್ಮ ಸಂದರ್ಭದ ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ ಪಲ್ಲಟಗಳು ನಮ್ಮ ಓದಿನ ಮೇಲೆ ಸೂಕ್ಷ್ಮವಾದ ಸಾಮಾಜಿಕ ಪರಿಣಾಮವಾನ್ನು ಉಂಟು ಮಾಡ್ತಾ ಇದ್ದಾವೆ. ಕಾವ್ಯದ ಓದು ಯಾವತ್ತೂ ಯಾಂತ್ರಿಕವಾದದ್ದಲ್ಲ. ವರ್ತಮಾನದ ವಿದ್ಯಮಾನಗಳ ಮಧ್ಯೆಯೇ ಓದುಗರು ನಿಂತಿರ್ತಾರೆ.

ನಮ್ಮ ಕಾಲದ ಅಗತ್ಯಗಳ ಹಿನ್ನೆಲೆಯಲ್ಲಿ ನಾವು ಕಾವ್ಯವನ್ನು ಆರಿಸಿಕೊಳ್ತಾ ಇರ್ತೀವಿ. ನೋಡೀ, ಸಿದ್ಧಾಂತ ಅನ್ನೋದು ಒಂದು ರೀತಿಯ ಟ್ರಾವೆಲಿಂಗ್. ಉದಾಹರಣೆಗೆ ಸ್ತ್ರೀವಾದ ತಗೊಳ್ಳೋಣ. ಸ್ತ್ರೀವಾದದ ಬೇರೆ ಬೇರೆ ಪಂಥಗಳು ನಮಗೆ ಹ್ಯಾಗೆ ಎದುರಾಗ್ತಾ ಇವೆ ನೋಡಿ, ಫ್ರೆಂಚ್, ಅಮೇರಿಕಾ, ಕಪ್ಪು ಲೇಖಕಿಯರ ಸ್ತ್ರೀವಾದ ಜೊತೆಗೇ ನಮ್ಮ ಭಾರತೀಯ ಸ್ತ್ರೀವಾದ. ಈ ಎಲ್ಲವೂ ನಮಗೆ ಯಾಕೆ ಮುಖ್ಯ, ಎಷ್ಟು ಮುಖ್ಯ ಮತ್ತು ಅಷ್ಟು ಪ್ರಸ್ತುತ ಅನ್ನೋದರ ಮೇಲೆ ಆ

ಸಿದ್ಧಾಂತಗಳನ್ನೋ, ಆ ಮೂಲಗಳಿಂದ ಹೊರಟ ಕೃತಿಗಳನ್ನೋ ಓದುಗರು ಆರಿಸಿಕೊಳ್ತಾ ಇರ್ತಾರೆ. ಸಿದ್ಧಾಂತಗಳಿಗೆ ಒಂದು ವಿಶ್ವ ಸಂಚಾರಿಭಾವ ಇರುತ್ತೆ. ನಮಗೆ ಬೇಖಾದ ಹಾಗೆ, ಅಗತ್ಯಕ್ಕೆ ತಕ್ಕ ಹಾಗೆ ಪರಿವರ್ತಿಸಿಕೊಳ್ಳುವುದರಲ್ಲಿಯೇ ಸೃಜನಶೀಲತೆಯ ಪ್ರಶ್ನೆ ಅಡಗಿದೆ ಅನ್ನಿಸುತ್ತೆ.

ನೀವು ಅಭಿರುಚಿಯ ಪ್ರಶ್ನೆ ಕೇಳಿದ್ರಿಂದ ಹೇಳ್ತಾ ಇದ್ದೀನಿ, ನಮ್ಮದೇ ಆದ ಒಂದು ಶುದ್ಧ ವಿಮರ್ಶಾ ಪಂಥ, ಸಿದ್ಧಾಂತ ಇದೆ ಅಂತಾಗಲೀ, ಕಾಲಾತೀತವಾದ ವಿಮರ್ಶೆಯ ಮಾನದಂಡಗಳಿವೆ ಅಂತ ನಾವು ತಿಳಿಯಬಾರದು. ವಿಮರ್ಶೆಯ ಮಾನದಂಡಗಳನ್ನೂ ನಾವು ಮತ್ತೆ ಮತ್ತೆ ಹೊಸದಾಗಿಯೇ ಕಟ್ಟಿಕೊಳ್ಳಬೇಕು. ಆಕ್ಟ್ ಆಫ್ ಕ್ರಿಯೇಷನ್ ಅನ್ನೋದು ಆಕ್ಟ್ ಆಫ್ ಕ್ರಿಟಿಸಿಸಮ್‌ನ ಮೇಲೂ ಪ್ರಭಾವ ಬೀರಬೇಕು. ವಿಮರ್ಶೆಯ ಶಕ್ತಿ ಮತ್ತು ಸೃಜನಶೀಲತೆ ಇರುವುದೇ ಇಲ್ಲಿ.

ಹಾಗೇನೇ ಪ್ರಭಾವದ ಅಭಿರುಚಿಯ ಪ್ರಶ್ನೆಯನ್ನು ನಾವು ಬಹಳ ಮಡಿವಂಟಿಕೆಯಿಂದ ನೋಡಬೇಕಿಲ್ಲ. ಯಾಕೆಂದರೆ ಈ ಪ್ರಕ್ರಿಯೆ ಒಂದು ಇನ್ನೊಂದರಿಂದ ಅನಾಮತ್ತಾಗಿ ತೆಗೆದುಕೊಂಡು ಬಿಡುವಂತದಲ್ಲ. ಅದು ನಮ್ಮ ವರ್ತಮಾನದ ಪ್ರಶ್ನೆಯೂ ಹೌದು, ಪೂರ್ವ ಪಶ್ಚಿಮಗಳ ಮಿಥುನದ, ಅನುಸಂಧಾನದ ಪ್ರಕ್ರಿಯೆಯೂ ಹೌದು. ಒಂದು ಇನ್ನೊಂದ್ರರಲ್ಲಿ ಕರಗ್ತಿ ನಮಗೆ ದಕ್ಕುವಂಥದ್ದು ಅದು.

ಆಶಾ : ಈ ಎಲ್ಲಾ ಮಾತುಗಳಲ್ಲೂ ವಿಮರ್ಶಾ ಪಂಥಗಳ ವರ್ಗೀಕರಣವನ್ನು ಕುರಿತ ಹಾಗೆ ನಿಮ್ಮ ನಿರಾಸಕ್ತಿ ಕಾಣಿಸುತ್ತೆ. ಈ ವರ್ಗೀಕರಣ ಕಾವ್ಯದ ಓದಿಗೆ ಪೂರಕವಲ್ಲ ಅಂತ ನೀವು ತಿಳೀತೀರ ? ಬೇರೆ ಏನಾದರೂ ಕಾರಣ ಇದೆಯಾ ?

ಕಿ.ರಂ : ಈ ಬಗೆಯ ವರ್ಗೀಕರಣ ಏನಿದೆ ಅದು ರೂಪುಗೊಂಡದ್ದು ಶೈಕ್ಷಣಿಕ ಹಿನ್ನೆಲೆಯಿಂದ ಮತ್ತು ಕಾರಣದಿಂದ. ಈ ವರ್ಗೀಕರಣವನ್ನು ನಾನು ಸಂಪೂರ್ಣವಾಗಿ ನಿರಾಕರಿಸ್ತೀನಿ ಅಂತಲ್ಲ. ನನಗನ್ನಿಸೋದು ವಿಮರ್ಶೆಯ ಒಂದು ಸ್ಕೂಲ್‌ಗೆ ಉಗ್ರ ನಿಷ್ಠರಾದವರು ನಮ್ಮಲ್ಲಿ ತುಂಬಾ ಕಡಿಮೆ. ಒಂದು ವಿಮರ್ಶಾ ವಿಧಾನದಲ್ಲಿ ನಂಬಿಕೆಯಿಟ್ಟವರು ಬೇರೆ ಬೇರೆ ವಿಮರ್ಶಾ ಪಂಥಗಳಿಂದಲೂ ಪರವಾನಗಿ ತಗೊಳ್ತಾನೆ ಇರ್ತಾರಲ್ವೇ ಅಂತ ನಾನು ಹೇಳೋದು.

ಆಶಾ : ನವ್ಯ ವಿಮರ್ಶೆಯ ಬಗ್ಗೆ ನಾವು ಈ ಮಾತನ್ನ ಹೇಳುವುದು ಸಾಧ್ಯವೇ ? ವಿಮರ್ಶಾ ಸಿದ್ಧಾಂತಗಳಿಗೆ ಮಹಾ ನಿಷ್ಠರಾದವರಲ್ಲವೇ ಅವರು.

ಕಿ.ರಂ : ನಾನು ಹೇಳ್ತಾ ಇರೋದು ಏನಂದ್ರೆ ದಲಿತ ಚಿಂತನೆಯನ್ನ, ಸ್ತ್ರೀ ಚಿಂತನೆಯನ್ನ ಕೇಂದ್ರವಾಗಿಟ್ಟುಕೊಂಡು ಇವತ್ತು ವಿಮರ್ಶೆ ಬರೀತಾ ಇದ್ದಾರೆ, ನಿಜ. ಆದ್ರೆ ಅದೇ ಹೊತ್ತಿಗೆ ಬೇರೆ ಬೇರೆ ವಿಮರ್ಶಾ ಪಂಥಗಳೂ ಈಗ ಪ್ರಾಕ್ಟೀಸ್‌ನಲ್ಲಿ ಇದ್ದಾವೆ ಅಲ್ಲವೆ ? ಇವುಗಳ ನಡುವೆ ಒಳಸಂಬಂಧಗಳೂ ಇವೆ ಅಲ್ಲವೇ ? ಮನೋವೈಜ್ಞಾನಿಕ, ಚಾರಿತ್ರಿಕ ಅಥವಾ ಮಾರ್ಕ್ಸಿಸ್ಟ್ ವಿಮರ್ಶೆಯ ವೃತ್ತಿಪರ ವಿಮರ್ಶಕರು ಎಷ್ಟು ಜನ ಇದ್ದರೆ ? ಫ್ರಾಯ್ಡ್‌ನನ್ನು ಆಧಾರವಾಗಿಟ್ಟುಕೊಂಡು ಕುವೆಂಪು ಕನಸುಗಳನ್ನು ಕುರಿತು ನಡೆಸುವ ಅಧ್ಯಯನ ಒಂದು ಅನುಶಂಗಿಕವಾದ, ಶೈಕ್ಷಣಿಕವಾದ ವಿವರಣೆ ಎಂತಲೇ ನಿನಗೆ ಅನ್ನಿಸುತ್ತದೆ. ಕುವೆಂಪು ಅವರು ಪ್ರತಿಪಾದಿಸಿದ ದಾರ್ಶನಿಕ ವಿಮರ್ಶೆ ಹಾಗೆ ನೋಡಿದ್ರೆ ಬರೀ ಸಿದ್ಧಾಂತವಾಗಿ ಮಾತ್ರ ಉಳಿದುಕೊಂಡಿತೇ ಹೊರತು ಅದರ ಪ್ರಾಯೋಗಿಕ ನೆಲೆಗಳು ಶೋಧಿತವಾಗಲೇ ಇಲ್ಲ.

ಆಶಾ : ಹಾಗಿದ್ರೆ, ಎಂ.ಜಿ.ಕೆ ತರದವರು ಅಪವಾದವೇ ?

ಕಿ.ರಂ : ಅಪವಾದವಲ್ಲವಾದರೂ ಅಪರೂಪ. ಆಕೃತಿಕೇಂದ್ರಿತ ವಿಮರ್ಶೆಯನ್ನು ಎಂ.ಜಿ.ಕೆ ತುಂಬಾ ಗಂಭೀರವಾಗಿ ಮಾಡಿದ್ರು ಅನ್ನೋದು ನಿಜ. ಜಿ.ಎಚ್.ನಾಯಕ್, ಹೆಚ್.ಎಸ್.ರಾಘವೇಂದ್ರರಾವ್ ಇವರೂ ತಮ್ಮ ಬರವಣಿಗೆಯ ಆರಂಭದಲ್ಲಿ ರೂಪನಿಷ್ಠ ವಿಮರ್ಶೆಯ ಕಡೆಗೆ ಆಸಕ್ತವಾಗಿದ್ದವರೇ. ಆದರೆ ನಂತರದ ಇವರ ಬರವಣಿಗೆಗಳಲ್ಲಿ ಖಂಡಿತವಾಗಿ ಒಂದು ಶಿಫ್ಟ್ ಕಾಣಿಸುತ್ತೆ.

ಆಶಾ : ಪಂಪ, ವಚನಕಾರರು, ಅಡಿಗರು – ನೀವು ಮತ್ತೆ ಮತ್ತೆ ಮರಳುವ ಮುಖ್ಯ ಕವಿಗಳು. ಯಾಕಾಗಿ ಇವರು ನಿಮಗೆ 'ಬತ್ತಲಾರದ ಗಂಗೆ' ಅನ್ನಿಸ್ತಾರೆ ?

ಕಿ.ರಂ : ಇವರು ಮಾತ್ರವಲ್ಲ, ಜಗತ್ತಿನ ಎಲ ಶ್ರೇಷ್ಠ ಕವಿಗಳಿಗೂ ನಾನು ಮತ್ತೆ ಮತ್ತೆ ಮರಳ್ತಾನೇ ಇದ್ದೀನಿ. ಇವರು ನನಗೆ ಎಷ್ಟು ಸಲ ಓದಿದಾಗಲೂ ಹೊಸದಾಗಿಯೇ ಕಾಣಿಸ್ತಾರೆ. ಇವರ ಕಾವ್ಯಗಳು ಏಕಾಕೃತಿಗಳಲ್ಲ. ಅವು ಅರ್ಥ ಸಂದಿಗ್ಧತೆಯ ಕಾವ್ಯಗಳು.

ಪರಿವರ್ತನಶೀಲತೆಯೇ, ರೂಪಾಂತರ ಶಕ್ತಿಯೇ ಇವುಗಳ ಮೂಲಗುಣ. ಒಂದು ಶ್ರೇಷ್ಠ ಶಿಲ್ಪವನ್ನು ಒಮ್ಮೆ ನೋಡಿ 'ಆಯಿತು', 'ಮುಗಿಯಿತು' ಎಂದುಕೊಳ್ಳಲಾಗುತ್ತದೆಯೇ ? ಬಾಹುಬಲಿಯನ್ನು ಎಷ್ಟು ಸಲ ನೋಡಿದರೂ ಅವನು ಹೊಸದಾಗಿಯೇ ಕಾಣಿಸುತ್ತಾನಲ್ಲವೇ ? ಅದನ್ನೇ ಪಂಪನೂ ಹೇಳುವುದು : ನಿತ್ಯಂ ಪೊಸತು ಅರ್ಣವಂಬೊಲ್ ಅತಿ ಗಂಭೀರಂ

ಕವಿತ್ವಂ'. ಈ ಕಾಲಕ್ಕೂ ಈ ಕವಿಗಳನ್ನು ಡಿರೈವ್ ಮಾಡಿಕೊಳ್ಳಬಹುದು. ನನ್ನ ಕಾಲಕ್ಕೂ ಅವರು ಪ್ರಸ್ತುತರು. ಯಾಕೆಂದರೆ ಬಹುಸ್ತರಗಳ ಕಾವ್ಯ ಅವರದು.

ಆಶಾ : ಸರ್, ಇದನ್ನೇ ಸ್ಪಷ್ಟಪಡಿಸಿಕೊಳ್ಳುವ ದೃಷ್ಟಿಯಿಂದ ಕೇಳ್ತಾ ಇದೀನಿ. ಪಂಪನ ಬಹು ಪ್ರಸಿದ್ಧವಾದ ಭರತ-ಬಾಹುಬಲಿಯರ ಪ್ರಸಂಗವನ್ನೋ, ಶ್ರೀಮತಿ-ವಜ್ರಜಂಘರ, ಪ್ರಸಂಗವನ್ನೋ ಇವತ್ತಿನ ಸನ್ನಿವೇಶದಲ್ಲಿ ನೀವು ಹೇಗೆ ವ್ಯಾಖ್ಯಾನಿಸುತ್ತೀರಿ ?

ಕಿ.ರಂ : ಭರತ-ಬಾಹುಬಲಿಯರ ಪ್ರಸಂಗ ತಗೊಳ್ಳಿ, ಆ ಪ್ರಸಂಗದಲ್ಲಿ ಪಂಪ ಎಷ್ಟು ಸಲ, ಎಷ್ಟು ವಿಭಿನ್ನ ಆಯಾಮಗಳಲ್ಲಿ 'ಎರಗು' ಎನ್ನುವ ಪರಿಕಲ್ಪನೆಯನ್ನು ಬಳಸ್ತಾನೆ ನೋಡಿ. ಎರಗಿಸಿಕೊಳುತ್ತೇನೆ, ಎರಗುತ್ತೇನೆ, ಎಲ್ಲರೂ ಎರಗಿದ್ದಾರೆ, ಎರಗುವುದರಲ್ಲಿ ತಪ್ಪೇನಿದೆ, ಯಾರಿಗೆ ಎರಗಬೇಕು, ಯಾಕೆ ಎರಗಬೇಕು ಹೀಗೆ, ಭರತ ಇವನನ್ನು ಎರಗಿಸಿಯೇ ತೀರುತ್ತೇನೆ ಎನ್ನುತ್ತಾನೆ. ಬಾಹುಬಲಿ ತಾನು ಎರಗುವುದಿಲ್ಲ ಎಂದುಕೊಳ್ಳುತ್ತಾನೆ. ಈ ಸನ್ನಿವೇಶ ವರ್ತಮಾನದ ಸ್ಥಿತಿಯನ್ನು ತುಂಬ ಚೆನ್ನಾಗಿ ಪ್ರತಿಬಿಂಬಿಸುತ್ತದೆ. ಅಮೇರಿಕಾ ಎಂಬ ಶಕ್ತಿ ಕಡಿಮೆ ಶಕ್ತಿಯ ರಾಷ್ಟ್ರಗಳನ್ನು ಹೇಗಾದರೂ ಎರಗಿಸಿಕೊಳ್ಳುವುದರಲ್ಲಿ ಆಸಕ್ತವಾಗಿದೆ. ಆಧುನಿಕ ಯುದ್ಧದ ಸನ್ನಿವೇಶಗಳನ್ನೂ, ಅವುಗಳ ಘರ್ಷಣೆಯ ನೆಲೆಗಳನ್ನೂ ನಾವಿಲ್ಲಿ ಗುರುತಿಸಬಹುದಾಗಿದೆ. ನಮ್ಮ ಬದುಕಿನ ಎಲ್ಲಾ ರಂಗಗಳಲ್ಲೂ ಪ್ರಧಾನ ಅಧೀನ ನೆಲೆಗಳ ನಡುವಿನ ಘರ್ಷಣೆಯೇ ಮುಖ್ಯ. ಪಂಪನ ಭರತ ಇದ್ದಾನಲ್ಲ, ಅವನು ಆಧುನಿಕ ಮನುಷ್ಯ ತದ್ವತ್ ರೂಪ. ಲಾಭದ, ದುರಾಸೆಯ ಅಧಿಕಾರಲಾಲಸೆಯ ಮನುಷ್ಯ ಅವನು.

ಶ್ರೀಮತಿ ವಜ್ರಜಂಘರ ಪ್ರಸಂಗದ ಮೂಲಕ ಪಂಪ ತನ್ನ ಆದರ್ಶದ ಭೋಗ ಭೂಮಿಯನ್ನು ಮೆಚ್ಚಿ ಪ್ರತಿಪಾದಿಸುತ್ತಾನೆ. ಗಂಡು ಹೆಣ್ಣಿನ ಸಂಬಂಧದ ಹಲವು ಆಯಾಮಗಳ ಪರಿಶೀಲನೆ ಇಲ್ಲಿದೆ. ಸಂಬಂಧದ ಅನ್ಯೋನ್ಯತೆ, ದುರಂತ, ಅಸಂಗತತೆ, ವಿಶಮತೆ ಎಲ್ಲವೂ ಇಲ್ಲಿ ಅಭಿವ್ಯಕ್ತವಾಗಿದೆ.

ಆಶಾ : ಹಾಗಿದ್ರೆ 'ಆದಿಪುರಾಣ' ಅಂತಿಮವಾಗಿ ಹೇಳೋದಕ್ಕೆ ಹೊರಟಿರುವುದು ಏನನ್ನು ? ಬದುಕನ್ನು ಅರಿತ ಅದಮ್ಯ ಪ್ರೀತಿಯನ್ನೋ ?

ಕಿ.ರಂ : 'ಆದಿ ಪುರಾಣ' ಎಂಬ ಶೀರ್ಷಿಕೆಯನ್ನೇ ಸೂಕ್ಷ್ಮವಾಗಿ ಗಮನಿಸಿ, ಅದು ಆದಿಯಿಂದ ಇಲ್ಲಿತ ತನಕದ ಆದಿಮ ಅಂತ ಕರೆಯಬಹುದಾದ ಮನೋಮನುಷ್ಯನಿಂದ ಹಿಡಿದು

ಯುದ್ಧಭೂಮಿಯ ಕಡೆಗೆ ಮನುಶ್ಃಯ ಚಲಿಸಿದ ಜೀವಯಾತ್ರೆಯ ಕಾವ್ಯ. ಒಂದು ರೀತೀಲಿ ಅದು ವಿಶ್ವಕೋಶ ಸದೃಶವಾದ ರಚನೆ. ಅನೇಕ ಗೂಡುಗಳ ಕಾವ್ಯ ಅದು. ಕೌಟುಂಬಿಕ ವಿವರಗಳು, ವಿಭಿನ್ನ ಧರ್ಮಗಳ ಸಹ ಅಸ್ತಿತ್ವ, ಪ್ರಭುತ್ವದ ಪ್ರಶ್ನೆ. ಹೆಣ್ಣಿನ ಮನೋದುರಂತ, ಖಡ್ಗದ ಸವಾಲು, ಅನುಯಾಯಿಗಳು, ಆಶ್ರಿತರಿಗೆ ಒದಗಿ ಬರುವ ಸಂಕಷ್ಟಗಳು, ಹೀಗೆ ಆದಿಪುರಾಣವು 'ಬಹುಸಂಕಟದ ಪ್ರಯಾಣಗಳ' ಕಾವ್ಯ.

ಆಶಾ : ಆದರೆ ಕನ್ನಡ ವಿಮರ್ಶೆಯು ಪಂಪನನ್ನು ಯಾವಾಗಲೂ ವರ್ಗೀಕರಣದ ಓದಿನಲ್ಲಿ ಹಿಡಿಯುವ ಪ್ರಯತ್ನವನ್ನೇ ಮಾಡುತ್ತಾ ಬಂದಿದೆಯಲ್ಲವೇ ?

ಕಿ.ರಂ : ಇದು ಯಾಕೆ ಹೀಗಾಯ್ತು ಅಂದ್ರೆ, ಸಾಮಾನ್ಯ ಇಂಗ್ಲೀಷ್ ಮಹಾಕಾವ್ಯಗಳ ಓದು ನಮ್ಮನ್ನು ಈ ಬಗೆಯ ಓದುಗಳಿಗೆ ಪ್ರಚೋದಿಸಿದೆ. ಜಿ.ಹೆಚ್.ನಾಯಕರಂಥ ಸೂಕ್ಷ್ಮ, ಪ್ರತಿಭಾವಂತ ವಿಮರ್ಶಕರು ಪಂಪನನ್ನು ಸೂಕ್ಷ್ಮವಾಗಿ ನೋಡಲು ಪ್ರಯತ್ನಿಸುತ್ತಾರೆ ಎನ್ನುವುದು ನಿಜ. ಆದರೆ ನಿರ್ದಿಷ್ಟ ದೃಷ್ಟಿಕೋನವೊಂದರಲ್ಲಿಯೇ ಪಂಪನನ್ನು ಇಡಿಯಾಗಿ ನೋಡುವ ಅವರ ಪ್ರಯತ್ನ ಮತ್ತೆ ಪಂಪನನ್ನು ಮಿತಿಯವಾದ ಓದಿಗೆ ಸೀಮಿತಗೊಳಿಸಿ ಬಿಡುತ್ತದೆ.

ಆಶಾ : ವಚನಕಾರರ ಬಗ್ಗೆ ...

ಕಿ.ರಂ : ಕಾವ್ಯ ಬರೀಬೇಕು ಅಂತ ಹೊರಟಾಗಲೇ ಕಾವ್ಯ ಬರಿಯೋದು ಕಷ್ಟ. ಕಾವ್ಯರಚನೆಯ ಉದ್ದೇಶವೇ ಇಲ್ಲದೆ ನಿತ್ಯಜೀವಂತವಾದ ಕಾವ್ಯ ರಚನೆ ಅವರಿಗೆ ಸಾಧ್ಯವಾಗಿ ಬಿಡ್ತು ನೋಡಿ. ಅದು ಲೋಕದ ವಿಸ್ಮಯಗಳಲ್ಲಿ ಒಂದು. ನನಗೆ ವಚನಕಾರರು ಕನ್ನಡ ಸಂಸ್ಕೃತಿಯ ಘನಿಷ್ಠ ರೂಪಕಗಳು. ಅವರು ೨೦ ಶತಮಾನಗಳ ಕನ್ನಡ ಚಿಂತನೆಯ ಆಯಸ್ಕಾಂತ ಅನ್ನಿಸ್ತಾರೆ. ಜಾತಿಯ ಪ್ರಶ್ನೆ, ಪ್ರಭುತ್ವದ ಸ್ವಾಲು, ಕಾಯಕದ ಪ್ರಶ್ನೆ, ಸ್ತ್ರೀತ್ವದ ಶೋಧ, ಮನುಷ್ಯ ಧರ್ಮದ ಆವಿಷ್ಕಾರ ಹೀಗೆ ನಮ್ಮ ಬದುಕಿನ ನಿತ್ಯಗಳ ಮೂಲಕವೇ ಅವುಗಳನ್ನು ಮೀರಲೂ ಪ್ರಯತ್ನಿಸಿದವರು. ಹೀಗಾಗಿ ಒಂದು ನೆಲೆಯಿಂದ ಇನ್ನೊಂದು ನೆಲೆಗೆ ವಚನಗಳು ಚಲಿಸುತ್ತವೆ. ಜೊತೆಗೆ, ಭಾಷೆಗೆ ಅವರು ತಂದುಕೊಟ್ಟ ಸಮೃದ್ಧಿ, ಸ್ವವಿಮರ್ಶೆಯ, ರಾಜಕೀಯ, ಆರ್ಥಿಕ, ನೈತಿಕ, ಸಾಮಾಜಿಕ ನ್ಯಾಯದ ಹೀಗೆ ಹಲವು ಭಾಷೆಗಳನ್ನು ಅವರು ಕನ್ನಡ ಭಾಷೆಯೊಳಕ್ಕೆ ತಂದರು.

ಆಶಾ : ಸರ್. ಅಡಿಗರನ್ನ ಕೂಡಾ ಹೊಸ ರೀತಿಯಲ್ಲಿ ಕಂಡುಕೊಳ್ಳುವ ಪ್ರಯತ್ನಗಳನ್ನು ಮಾಡ್ತಾ ಇದ್ದೀವಲ್ವಾ ? ಹೆಣ್ಣು ಅಡಿಗರ ಕಾವ್ಯದ ಮೂಲ ಕೇಂದ್ರಗಳಲ್ಲಿ ಒಂದು ಎಂದು ಗುರುತಿಸಲು ಸಾಧ್ಯವಾಗದೇ ಇದ್ದರೂ ಭೂಮಿಗೀತದಂಟಹ ಮುಖ್ಯ ಕಪನಗಳಲ್ಲಿ ಹೆಣ್ಣನ್ನು ಕುರಿತ ಅನೇಕ ವಿಚಾರಗಳನ್ನು ಇವತ್ತು ಗುರುತಿಸೋದಿಕ್ಕೆ ಸಾಧ್ಯ ಇದೆ ಅಲ್ವಾ ? ಒಂದು ದಿವಸ ನಾವು ಅಡಿಗರ ಕಾವ್ಯ ಮತ್ತು ಇಕೊಫೆಮಿನಿಸಂನ ಬಗೆಗೆ ಮಾತಾಡ್ತಾ ಇದ್ವಿ, ಆ ಹಿನ್ನೆಲೆಯಲ್ಲಿ ಈ ಪ್ರಶ್ನೆ ಕೇಳ್ತಾ ಇದ್ದೀನಿ.

ಕಿ.ರಂ : ಇಡೀ ಭೂಮಿಗೀತವೇ ಇಕೊಫೆಮಿನಿಸಂನ ಪ್ರಣಾಳಿಕೆಯಂತೆ ನನಗೆ ಕಾಣಿಸುತ್ತದೆ. ಹೆಣ್ಣು ಮತ್ತು ಪ್ರಕೃತಿಯ ಮೇಲಿನ ಶೋಷಣೆಯ ಜೊತೆಜೊತೆಗೇ ಈ ಎರಡರ ಅಸಾಧಾರಣ ಶಕ್ತಿಯನ್ನು ಮಾತ್ರವಲ್ಲ. ಗಂಡು ಹೆಣ್ಣಿನ ಸಂಬಂಧದ, ಸಂಘರ್ಷದ ಅನೇಕ ನೆಲೆಗಲನ್ನ ಈ ಕವನ ಶೋಧಿಸುತ್ತದೆ. 'ಏನಾದರು ಮಾಡುತಿರು ತಮ್ಮ' ಕವನ ಕೂಡ ಈ ತಾತ್ವಿಕತೆಯನ್ನೇ ಒಳಗೊಂಡಿವೆ. ಒಬ್ಬ ಶಕ್ತ ಕವಿಯನ್ನ ಬದಲಾದ ಕಾಲ ಮತ್ತು ಆಶಯಗಳ ಹಿನ್ನೆಲೆಯಲ್ಲಿ ಎಷ್ಟೊಂದು ಬಗೆಯಲ್ಲಿ, ನಮ್ಮ ಕಾಲದ್ದೇ ಅನ್ನುವ ಹೊಸತನದಲ್ಲಿ ಕಟ್ಟಿಕೊಳ್ಳಬಹುದು ಅನ್ನುವುದಕ್ಕೆ ಎಲ್ಲ ಒಳ್ಳೆಯ ಕವಿಗಳ ಹಾಗೆ ಅಡಿಗರೂ ಒಂದು ಒಳ್ಳೆಯ ಉದಾಹರಣೆ.

ಆಶಾ : ಒಂದು ದಿವಸ ನನ್ನ ಜೊತೇಲಿ ಮಾತಾಡ್ತಾ ಇದ್ದಾಗ 'ಇವತ್ತು ಸಾಯಂಕಾಲ ಅಕ್ಕಮಹಾದೇವಿಯ ಜೊತೆ ವಾಕಿಂಗ್ ಹೋಗಿದ್ದೆ' ಅಂತ ನೀವು ಹೇಳಿದ್ರಿ, ಹೀಗೆ ವಾಕಿಂಗ್‌ನಲ್ಲಿ ಊಟದ ಹೊತ್ತಿನಲ್ಲಿ ನಿಮಗೆ ಕವಿಗಳು ಭೇಟಿಯಾಗ್ತಾನೆ ಇರ್ತಾರಾ ?

ಕಿ.ರಂ : ನಾನು ಅಕ್ಕನನ್ನ ಗ್ರಹಿಸಿಕೊಳ್ಳೇದೇ ಹೀಗೆ. ಅವಳು ನನ್ನ ಪರಮ ಸ್ನೇಹಿತೆ. ಕವಿಗಳು ನನಗೆ ಜೀವಂತಗೊಳ್ಳೋದು ಈ ಬಗೆಯಲ್ಲಿ. ಸಾಹಿತ್ಯದ ಶೈಕ್ಷಣಿಕವಾದ ಗ್ರಹಿಕ ವಿಧಾನಗಳನ್ನು ಮೀರೋದು ನನಗೆ ಇದರಿಂದ ಸಾಧ್ಯವಾಗಿದೆ. ಯಾವ ಒಳ್ಳೆಯ ಕವಿಗಳೂ ನನಗೆ ಪಾಸ್ಟ್ ಅಲ್ಲ. ಅವರೆಲ್ಲರೂ ನನಗೆ ಜೀವಂತವೇ, ನನ್ನೆದುರಿಗೇ ಇರುವವರು. ನಾನು ಅವರ ಜೊತೆಯಲ್ಲಿ ಸಂವಾದ ನಡೆಸ್ತಾ ಇದ್ದೀನಿ. ಭಾಷಾ ಶರೀರದಾಚೆಗೂ ನನಗೆ ಕಾವ್ಯದ ಅಸ್ತಿತ್ವವಿದೆ. ಕಾವ್ಯದ ಮೂಲಕ ಕವಿ ಬದುಕಿನ ಒಂದು ಭಾಗವನ್ನು ನಮಗಾಗಿ ತೆರೆದಿರ್ತಾನೆ.

ಪ್ರಾಣದ ಕೆಚ್ಚನು ಕೆತ್ತಿ ಹೊತ್ತಿಸಿದೆ
ಲೀಲೆಯಲಿ ತೂರಿ ಅನಾಯಸ

ಅಂತ ಬೇಂದ್ರೆ ಹೇಳೋದು ನನಗೆ ಅಕ್ಷರಶಃ ನಿಜ.

ನನಗೆ ವಿದ್ಯಾರ್ಥಿ ಸಮುದಾಯದಲ್ಲಿ ಕಾವ್ಯಾಭಿರುಚಿಯನ್ನು ಮೂಡಿಸಲೂ ಈ ದಾರಿಗಳು ಅಗತ್ಯ. ಕಾವ್ಯ ಅನ್ನೋದು ಕೇವಲ ಒಂದು ಪಠ್ಯವಲ್ಲ. ಕಾವ್ಯದ ಓದು ಜೀವಂತವಾಗಲು, ಆಸಕ್ತಿದಾಯಕವಾಗಲು ಈ ಬಗೆಯ ರೂಪಕದಾರಿಗಳು ನೆರವು ನೀಡುತ್ತವೆ. ವಿದ್ಯಾರ್ಥಿಗಳು ಕಾವ್ಯವನ್ನು ಛಿದ್ರಗೊಳಿಸಲಿ, ನನಗೆ ಅದರ ಬಗ್ಗೆ ಚಿಂತೆಯಿಲ್ಲ. ಆದರೆ ಕಾವ್ಯವನ್ನು ಅವರು ನೇತ್ಯಾತ್ಮಕವಾಗಿ ನೋಡಬಾರದು, ಇತ್ಯಾತ್ಮಕವಾಗಿ ನೋಡೋದಕ್ಕೆ ಸಾಧ್ಯವಾಗಬೇಕಾದರೆ ಶೈಕ್ಷಣಿಕವಾಗಿ ನಾವು ರೂಪಿಸಿದ ಯಾಂತ್ರಿಕ ಕ್ರಮಗಳನ್ನು ಒಡೆದು ಹೊಸ ದಾರಿಗಳನ್ನು ಹುಡುಕಬೇಕು.

ಆಶಾ : ಕಾವ್ಯವನ್ನು ನೇತ್ಯಾತ್ಮಕವಾಗಿ ನೋಡಬಾರದು ಅಂದ್ರಿ, ಕೆಲವು ಕವಿಗಳ ಬಗ್ಗೆ ನಿಮಗೆ ನೇತ್ಯಾತ್ಮಕ ಅಂತ ಕರೆಯಬಹುದಾದ ನಿಲುವು ಇದೆ ಅಲ್ವೆ ? ಉದಾಹರಣೆಗೆ ನರಸಿಂಹಸ್ವಾಮಿ...

ಕಿ.ರಂ : ಇದು ನೇತ್ಯಾತ್ಮಕ ಅಂತಲ್ಲ, ಕೆಟ್ಟ ಕವಿ ಅಂತಲೂ ಅಲ್ಲ, ನಾನು ಹೇಳೋದು ಅವರು ಅಏಕ ಪರಿಮಿತಿಗಳ ಕವಿ ಅಂತ. ಮಧ್ಯಮವರ್ಗದ ಅನುಭವಕ್ಕೇ ಸೀಮಿತಗೊಂಡ ತನ್ನನ್ನೇ ತಾನು ರಿಪೀಟ್ ಮಾಡಿಕೊಂಡ ಕವಿ ಅವರು.

ಆಶಾ : ನಾನೊಮ್ಮೆ ಅಕ್ಕಮಹಾದೇವಿಯ ದೇಹವನ್ನ ಕುರಿತ ದ್ವಂದ್ವಾತ್ಮಕವಾದ ನಿಲುವುಗಳ ಬಗ್ಗೆ ತಲೆ ಕೆಡಿಸಿಕೊಂಡಿದ್ದಾಗ ನೀನು ಫೆಮಿನಿಸಂ ಬಿಟ್ರೆ ಅಕ್ಕ ಸಿಕ್ತಾ ಅಂದಿದ್ರಿ, ಅದರ ಬಗ್ಗೆ ಸ್ವಲ್ಪ ಹೇಳಿ.

ಕಿ.ರಂ : ಫೆಮಿನಿಸಂ ಅನ್ನುವ ಚೌಕಟ್ಟನ್ನೂ ಮನುಷ್ಯ ದೇಹದ ಮತ್ತು ಪರಿಸರದ ದುರ್ದಮ್ಯತೆಯನ್ನೂ ಒಟ್ಟಿಗೇ ಇಟ್ಟು ನೋಡಬೇಕೇನೋ ಅನ್ನುವ ಅರ್ಥದಲ್ಲಿ ಹಾಗೆ ಹೇಳಿದ್ದೆ. ಗಂಡಾಗಲೀ ಹೆಣ್ಣಾಗಲೀ ತನ್ನ ದೇಹ ಮತ್ತು ಆತ್ಮದ ಸವಾಲುಗಳನ್ನು ನಿರ್ದೇಶಿತ ದಾರಿಗಳ ಜೊತೆಯಲ್ಲೇ ತಮ್ಮದೇ ಆದ ದಾರಿಯಲ್ಲೂ ಎದುರಿಸ್ತಾ ಇರ್ತಾರೆ. ಬದುಕನ್ನ ತೀವ್ರವಾಗಿ ಪ್ರೀತಿಸ್ದ ಅಕ್ಕ ದೇಹವನ್ನೂ ಆ ಪ್ರೀತಿಯ ಒಂದು ಭಾಗವಾಗಿಯೇ ನೋಡಿದವಳು. ಹೀಗಾಗಿ ಅವಳ ದೇಹದ ನಿರಾಕರಣೆಯನ್ನೂ ಈ ಪ್ರೀತಿಯ ಒಂದು ಸಾಧ್ಯತೆಯಾಗಿಯೇ ನೋಡಬೇಕು. ಸ್ತ್ರೀವಾದ ಅನ್ನೋದಿದೆಯಲ್ಲಾ ಅದನ್ನ ನಾವು ಎಲ್ಲಿಂದಲೋ ಎತ್ತಿಕೊಂಡು ಬಿಡೋದಲ್ಲ. ಅದನ್ನ ನಾವು

ಕನ್ಸ್ಟ್ರಕ್ಟ್ ಮಾಡಿಕೊಳ್ಳಬೇಕು. ಹೀಗೆ ಕನ್ಸ್ಟ್ರಕ್ಟ್ ಮಾಡಿಕೊಂಡಾಗಲೇ ನಮಗೆ ಬೇಕಾದ ದ್ರೌಪದಿ, ಅಕ್ಕ, ಸೂಳೆ ಸಂಕವ್ವೆ ಎಲ್ಲರೂ ಸಿಗೋದು.

ಆಶಾ : ನಾಡಿನಾದ್ಯಂತ ಕಾವ್ಯಾಭಿರುಚಿ ಶಿಬಿರಗಳನ್ನು ಅವ್ಯಾಹತವಾಗಿ ನೀವು ನಡೆಸ್ತಾ ಇದ್ದೀರ. ಈ ಬಗೆಯ ಶಿಬಿರಗಳ ಅಗತ್ಯ, ಪ್ರಸ್ತುತತೆಯ ಬಗ್ಗೆ ಹೇಳಿ.

ಕಿ.ರಂ : ಈ ಬಗೆಯ ಶಿಬಿರಗಳಿಂದ ನನಗೆ ಬಹಳ ಸಂತೋಷ ಆಗಿದೆ. ಎರಡು ಅಥವಾ ಮೂರು ದಿನಗಳ ಈ ಶಿಬಿರಗಳಲ್ಲಿ ಭಿನ್ನ ಕ್ಷೇತ್ರಗಳ, ಭಿನ್ನ ರುಚಿಗಳ ಜನ ಸೇರಿದ್ದಾರೆ. ಗೃಹಿಣಿಯರು, ವಿದ್ಯಾರ್ಥಿಗಳು, ಉದ್ಯಮಿಗಳು ಹೀಗೆ ಬೇರೆ ಬೇರೆ ರಂಗದವರು ಅಲ್ಲಿ ಒಗ್ಗೂಡಿದ್ದಾರೆ. ಇಲ್ಲಿ ಕೆಲವು ಅಂಶಗಳನ್ನು ಹೇಳಬೇಕು. ಯಾವ ಸಮುದಾಯದಲ್ಲೂ ಕಾವ್ಯದ ಜೀವರಸ ಹರೀಟಾನೆ ಇರುತ್ತೆ. ಗೃಹಿಣಿಯೊಬ್ಬರು ಮಗುವನ್ನು ಆಡೀಸುವಾಗಲೇ ಶುರುವಾಗುತ್ತೆ ಕಾವ್ಯಪ್ರಜ್ಞೆ. ಅದು ಹೊರಗಿನಿಂದ ಕಲಿಸುವ ಶಿಸ್ತಲ್ಲ, ಅದು ಪ್ರತಿಯೊಬ್ಬರಲ್ಲೂ ಒಳಗೆ ಇದ್ದೇ ಇರುತ್ತೆ. ಈ ಬಗೆಯ ಶಿಬಿರಗಳ ಮೂಲಕವೋ ಇತರ ಪ್ರಯತ್ನಗಳ ಮೂಲಕವೋ ನಾವು ಮಾಡಬಹುದಾದ್ದೆಂದರೆ ಈ ಕಾವ್ಯ ಪ್ರಜ್ಞೆಯ ಜೊತೆಯಲ್ಲಿ ಅನುಸಂಧಾನ ನಡೆಸುವುದನ್ನು ಹಾಗೂ ಹೀಗೆ ಅನುಸಂಧಾನ ಮಾಡುವುದರ ಮೂಲಕವೇ ಕಾವ್ಯಪ್ರಜ್ಞೆಯನ್ನು ಅಭಿವೃದ್ಧಿಗೊಳಿಸುವ, ಜಾಗೃತಿಗೊಳಿಸುವ, ಸೂಕ್ಷ್ಮಗೊಳಿಸುವ ಪ್ರಕ್ರಿಯೆಯನ್ನು ವಿಸ್ತರಿಸುವುದು. ಈ ಪ್ರಕ್ರಿಯೆಯು ಲೋಕದ ನೋಡುವಿಕೆಗೆ ಶಕ್ತಿಯನ್ನು ಒದಗಿಸಿಕೊಡುತ್ತದೆ. ಈ ಬಗೆಯ ಶಿಬಿರಗಳನ್ನು ನಡೆಸುವಾಗ, ಅಲ್ಲಿ ಬಂದವರಿಗೆ ಕಾವ್ಯ ಗೊತ್ತಿಲ್ಲ, ರೂಪಕಗಳು ಗೊತ್ತಿಲ್ಲ, ಪ್ರತಿಮೆಗಳು ಗೊತ್ತಿಲ್ಲ ಎಂದು ಯಾವ ಕಾರಣಕ್ಕೂ ತಿಳಿಯಬಾರದು. ಕಾವ್ಯ ಎಲ್ಲರಿಗೂ ಅಲ್ಲ, ಅದು ಕ್ಲಿಷ್ಟ, ಇವೆಲ್ಲಾ ಕಾವ್ಯವನ್ನು ಕುರಿತ ಅಪಗ್ರಹಿಕೆಗಳು. ಈ ಬಗೆಯ ಅಪಗ್ರಹಿಕೆಗಳನ್ನು ಕಳೆಯೋದು ಇವತ್ತು ನಮ್ಮೆಲ್ಲರ ಕರ್ತವ್ಯವಾಗಿದೆ. ನನ ಜೊತೇಲಿ ಅನೇಕ ಶಿಬಿರಗಳಲ್ಲಿ ಭಾಗವಹಿಸಿರುವ ನೀವು ಈ ಅಂಶಗಳನ್ನೆಲ್ಲ ಒಪ್ತೀರ ಅಂತಲೇ ನಾನು ತಿಳಿದಿದೀನಿ.

ಆಶಾ : ಇತ್ತೀಚೆಗೆ ಮಂಟೇಸ್ವಾಮಿ, ಮಲೆಮಹದೇಶ್ವರ ಕಾವ್ಯಗಳ ಕಡೆಗೆ ನೀವು ತುಂಬ ಆಸಕ್ತಿ ತೋರಿಸ್ತಾ ಇದ್ದೀರಿ. ಈ ಕಾವ್ಯಗಳನ್ನು ಕುರಿತ ಚರ್ಚೆಯನ್ನು ಮುನ್ನೆಲೆಗೆ ತರುವ ಪ್ರಯತ್ನಗಳೂ ನಡೀತಾ ಇವೆ.

ಕಿ.ರಂ : ಈ ಪ್ರಯತ್ನಗಳು ಮೂಲತಃ ಶಿಷ್ಟ – ಜನ್‌ಪದದ್ ವ್ಯತ್ಯಾಸವನ್ನು ಅಳಿಸುವ ದಿಕ್ಕಿನಲ್ಲಿರುವಂಥವು. ಎ.ಕೆ.ರಾಮಾನುಜನ್, ಡಿ.ಆರ್.ನಾಗರಾಜ್, ನಾನು – ನಾವೆಲ್ಲರೂ ಹೇಳೋದಕ್ಕೆ ಪ್ರಯತ್ನಿಸ್ತಾ ಇರೋದು ಆದಿಪುರಣವೂ, ಮಲೆಮಹದೇಶ್ವರ ಕಾವ್ಯವೂ ಸೇರಿಯೇ ಕನ್ನಡ ಸಂಸ್ಕೃತಿ ನಿರ್ಮಾಣಗೊಂಡಿದೆ ಅಂತ ಶಿಷ್ಟ ಮತ್ತು ಜಾನಪದದ ನಡುವೆ ಯಾವಾಗಲೂ ಕೊಡು–ಕೊಳ್ಳುವಿಕೆ ನಡೆಯುತ್ತಲೇ ಇದೆ. ಈ ಎರಡೂ ಅತ್ಯುತ್ತಮ ಪಠ್ಯಗಳಲ್ಲಿಯ ಕಾಮನಾಲಿಟೀಯನ್ನು ಗುರುತಿಸುವ ಪ್ರಯತ್ನ ಈಗ ನಡೀತಾ ಇದೆ. ಬೆಂಗಳೂರಿನಲ್ಲಿ ಕೆಲವು ತಿಂಗಳ ಹಿಂದೆ ಮಂಟೇದಿನ ಅಂತ ಮಾಡಿದ್ವಿ. ಇಡೀ ರಾತ್ರಿ ಮಂಟೇಸ್ವಾಮಿ ಕೃತಿಯನ್ನು ಕೆಂಪಮ್ಮ ಅವರ ಜೊತೆಯವರು ಹಾಡೀದರು. ಮಧ್ಯೆ ಮಧ್ಯೆ ನಾವು ಅದಕ್ಕೆ ವಿವರಣೆಯನ್ನು ಕೊಡ್ತಾ ಇದ್ವಿ. ಈ ಪ್ರಯತ್ನದ ಉದ್ದೇಶವೂ ಶಿಷ್ಟ – ಜನಪದದ ನಡುವಿನ ದೊಡ್ಡ ಕಂದರವನ್ನು ಮೀರೋದೇ ಆಗಿತ್ತು.

ಆಶಾ : ನೀವು ಎರಡು ನಾಟಕಗಳನ್ನು ಬರೆದಿದ್ದೀರಿ : 'ಕಾಲಜ್ಞಾನಿ ಕನಕ', 'ನೀಗಿಕೊಂಡ ಸಂಸ', ನಾಟಕ ಪ್ರಕಾರ ನಿಮಗೆ ತುಂಬ ಪ್ರಿಯವಾದದ್ದೋ ಅಥವಾ ಇದಕ್ಕೆ ಬೇರೆ ವಿಶೇಷ ಕಾರಣಗಳೇನಾದರೂ ಇವೆಯೆ ?

ಕಿ.ರಂ : ಸಂಸರ ಬಗ್ಗೆ ಮುಂಚಿನಿಂದಲೂ ಕುತೂಹಲ ಇತ್ತು, ಸಿ.ಜಿ.ಕೆಯವರ ಒತ್ತಾಸೆಯೂ ಕಾರಣವಾಯ್ತು. ನನಗೆ ವಿದ್ಯಾರ್ಥಿದೆಸೆಯಿಂದಲೂ ಸಂಸರ ಸಾವಿನ ಬಗ್ಗೆ, ಚರಿತ್ರತೆಯನ್ನು ಕುರಿತ ಅವರ ವ್ಯಾಮೋಹದ ಬಗ್ಗೆ, ವಿಲಕ್ಷಣವಾಗಿ ಕಾಣಿಸುತ್ತಿದ್ದ ಅವರ ನಿಷ್ಠುರ ನಡವಳಿಕೆಯ ಬಗ್ಗೆ ಕುತೂಹಲ ಇತ್ತು. ಈ ನಾಟಕ ಬರೆಯುವ ಹೊತ್ತಿಗೆ ನನ್ನ ಖಚಿತವಾದ ಉದ್ದೇಶ ಇದ್ದದ್ದು ಸಂಸರ ವ್ಯಕ್ತಿತ್ವ ಮತ್ತು ಚರಿತ್ರೆಯನ್ನು ಅವರು ನಾಟಕಗಳಿಗೆ ದ್ರವ್ಯವನ್ನಾಗಿ ಮಾಡಿಕೊಂಡದರ ಒಳಸಂಬಂಧವನ್ನು ಎಕ್ಸ್‌ಪ್ಲೋರ್ ಮಾಡಬೇಕು ಅನ್ನುವುದು. ವಸಾಹತು ಸಂದರ್ಭದ ಪರಿಶೀಲನೆಯೂ ನನ್ನ ಮನಸ್ಸಿನಲ್ಲಿತ್ತು.

ನೋಡಿ, ಎಷ್ಟು ಕುತೂಹಲಕರವಾಗಿದೆ. ಕಂಠೀರವ ಹೊಸ ನಾಣ್ಯಗಳನ್ನು ಪರಿಚಯಿಸುವ ಉತ್ಸಾಹದಲ್ಲಿದ್ದಾನೆ. ಆದರೆ ಆಗ ಮೈಸೂರಿನಲ್ಲಿ ಚಲಾವಣೆಯಲ್ಲಿದ್ದದ್ದು ಬ್ರಿಟೀಷ್ ರಾಣಿಯ ನಾಣ್ಯಗಳು. ಹಾಗೆ ನೋಡೀದರೆ, ಇವರು ನಾಣ್ಯವೇ ಇಲ್ಲದ ರಾಜರುಗಳು. ಇಂಥ ಹೊತ್ತಿನಲ್ಲಿ ಹೊಸ ನಾಣ್ಯಗಳನ್ನು ಬಿಡುಗಡೆ ಮಾಡುವ ವಿಪರ್ಯಾಸವನ್ನು ಚರ್ಚೆಗೆ ಎತ್ತಿಕೊಳ್ಳುವುದರ ಮೂಲಕ ಸಂಸರು ನೆನಪಿನ ಕಥನ ಮಾಡ್ತಾ ಇದ್ದಾರೋ ? ವರ್ತಮಾನದ ವ್ಯಾಖ್ಯಾನ

ಕಟ್ಟಿಕೊಳ್ಳಲು ಯತ್ನಿಸಿದರೋ ? ವರ್ತಮಾನದ ತಲ್ಲಣಗಳಿಗೆ ಚರಿತ್ರೆಯ ನೆರವು ತೆಗೆದುಕೊಳ್ಳಾ ಇದ್ದಾರೋ ? ಪ್ರಭುತ್ವಕ್ಕೆ ಎದುರಾದ ಸವಾಲುಗಳನ್ನು ಚರ್ಚಿಸಿದ್ದಾರೋ ? ಈ ಎಲ್ಲವೂ ನನ್ನ ಮನಸ್ಸಿನಲ್ಲಿ ಇದ್ದವು.

'ಕಾಲಜ್ಞಾನಿ ಕನಕ' ಬರೆಯುವಾಗ ನನ್ನ ಮನಸ್ಸಿನಲ್ಲಿದ್ದದ್ದು ಗ್ರಾಮೀಣ ಕರ್ನಾಟಕದ ಒಬ್ಬ ಅನುಭಾವಿಯನ್ನು ನೋಡಬೇಕು ಅಂತ. ಯಾಕೆ ಅಂದ್ರೆ ವ್ಯಾಸಕೂಟ – ದಾಸಕೂಟದ ಪ್ರಶ್ನೆಯ ಹಿನ್ನೆಲೆಯಲ್ಲಿ ಸಂಪ್ರದಾಯವಾದಿಗಳು ಕನಕನನ್ನು ದೂರದಲ್ಲಿಯೇ ಇಟ್ಟೀದ್ದರು. ಕನಕ ದೇವಾಲಯದಿಂದ ಹೊರಬಂದು ತಾನೇ ಸಮುದಾಯದ ಜೊತೆಯಲ್ಲಿ ಬೆರೆತು ಹೋಗಿಬಿಡ್ತಾನೆ. ಈ ಅಂಶ ನನಗೆ ತುಂಬ ಮುಖ್ಯ ಅನ್ನಿಸಿತು. ಯಾಕೆ ಅಂದ್ರೆ, ದೇವಾಲಯ ಸಂಸ್ಕೃತಿಯನ್ನು ಪ್ರಶ್ನಿಸುವ ಮಾದರಿಗೆ ಕನ್ನಡದಲ್ಲಿ ಒಂದು ಪಂಪರೆಯೇ ಇದೆ. ಅಲ್ಲಮ, ಬಸವಣ್ಣ, ಚಾಮರಸ, ತತ್ವಪದಕಾರರು ಇವರೆಲ್ಲರೂ ಈ ಪರಂಪರೆಯವರೇ ನಾನು ಈ ನಾಟಕ ಬರೆಯುವ ಹೊತ್ತಿನಲ್ಲಿ ದೇಶದಲ್ಲಿ ಮಸೀದಿ ಮಂದಿರಗಳ ಚರ್ಚೆ ತೀವ್ರವಾಗಿತ್ತು. ಅದರ ಜೊತೆಯಲ್ಲಿ ಒಂದು ಸಂವಾದ ಬೆಳೆಸಬಹುದು ಅನ್ನಿಸಿತು.

ಆಶಾ : ಚಾಮ್‌ಸ್ಕಿ ಇತ್ತೀಚೆಗೆ ನಿಮ್ಮನ್ನು ಆವರಿಸಿರುವ ಲೇಖಕ. ನಮ್ಮ ಸಂದರ್ಭದಲ್ಲಿ ಚಾಮ್‌ಸ್ಕಿ ಯಾಕೆ ಮುಖ್ಯ ?

ಕಿ.ರಂ : ಅಮೇರಿಕಾದ ಸಾಮ್ರಾಜ್ಯಶಾಹಿ ಮದ್ಯೆ ನಿಂತುಕೊಂಡೂ ಅಮೇರಿಕಾ ತನ್ನೊಳಗೂ, ಹೊರಗೂ ಎಷ್ಟು ಪ್ರಜಾಪ್ರಭುತ್ವ ವಿರೋಧಿ ಅನ್ನೋದನ್ನ ಹೇಳ್ತಾ ಇರುವವನೇ ಚಾಮ್‌ಸ್ಕಿ, ಅಮೇರಿಕಾದ ಸಂಚಿನ ನೆಲೆಗಳನ್ನು ಬಹಿರಂಗ ಪಡಿಸುತ್ತಿರುವ ಚಾಮ್‌ಸ್ಕಿ ಅನೇಕ ಕಾರಣಗಳಿಗೆ ನನಗೆ ಜೀನಿಯಸ್ ಅನ್ನಿಸ್ತಾನೆ. ಅಮೇರಿಕಾದಲ್ಲಿ ಅಡ್ಡಾದಿಡ್ಡಿ ಬೆಳೆಯುತ್ತಿರುವ ವಿಜ್ಞಾನದ ಬಗ್ಗೆ, ಅಮೇರಿಕಾದ ಆರ್ಥಿಕಕೋಟೆಯ ಬಗ್ಗೆ, ಪೊಲೀಸ್ ವ್ಯವಸ್ಥೆಯ ಬಗ್ಗೆ, ವಿಯೆಟ್ನಾಂ ಯುದ್ಧದ ಬಗ್ಗೆ, ಹೀಗೆ ನಮ್ಮನ್ನು ಕಾಡುವ ಎಲ್ಲ ವಿಷ್ಜಯಗಳ ಬಗ್ಗೆ ಅಸಾಧಾರಣ ನೈತಿಕ ಸ್ಥೈರ್ಯದಿಂದ ಯೋಚಿಸುವ, ಬರೆಯುವ ಲೇಖಕ ಚಾಮ್‌ಸ್ಕಿ. ಅದಕ್ಕೇ ನನಗೆ ಅವನು ತುಂಬಾ ಮುಖ್ಯ.

ಆಶಾ : ಅನೇಕ ಕಾರಣಗಳಿಗಾಗಿ ನಿಮ್ಮನ್ನು ಕನ್ನಡದ ಎಜ್ರಾಪೌಂಡ್ ಅಂತ ಕರೆಯಬಹುದು. ಅನೇಕ ಕೃತಿಗಳ ಸೂಲಗಿತ್ತಿ, ಮೊದಲ ಓದುಗ ಎಲ್ಲವೂ ಆಗಿರುವ ನಿಮಗೆ

ಈಬಗೆಯ ಸೃಜನಶೀಲವೆಂದೇ ಕರೆಯಬಹುದಾದ ಕೆಲಸಗಳಲ್ಲಿ ತೊಡಗಿಸಿಕೊಂಡಾಗ ಆಗುವ ಅನುಭವ ಎಂತಹದು ?

ಕಿ.ರಂ : ತುಂಬಾ ಸಂತೋಷದ ಅನುಭವ ಅದು. ನಾನು ಆರಂಭದ ಕಾಮೆಂಟ್ ಮಾಡ್ತೀನಿ ಅಷ್ಟೆ. ನಾನು ಯಾವುದಕ್ಕೂ ತಿದ್ದೋಕೆ ಹೋಗೊಲ್ಲ, ನನಗೆ ಹೀಗೆ ಕೇಳಿಸುತ್ತೆ ಹೀಗಿದ್ರೆ ಸರಿಯಾಗಿರಬಹುದೇಣೋ, ಈ ವಾಕ್ಯದ ಪ್ಲೇಸ್‌ಮೆಂಟ್ ಸರಿಯಾಗಿಲ್ಲ, ಇದನ್ನು ಓದ್ತಾ ಇದ್ರೆ ಇಂತಹವರ ಕಾವ್ಯದ ನೆನಪು ಬರುತ್ತೆ, ಅದರ ಅನುಕರಣೆಯ ಹಾಗಿದೆ. ಹೀಗೆ ಕೆಲವು ಸಲಹೆಗಳನ್ನು ಕೊಡ್ತೀನಿ, ಅಷ್ಟೆ.

ಆಶಾ : ಆದರೆ ಹೀಗೆ ಸಲಹೆಗಳನ್ನು ಅವರಿಗೆ ತೋರಿಸ್ತೀನಿ, ಶೀರ್ಷಿಕೆ ಸೂಚಿಸಿರಬಹುದು, ಕೆಲವೊಮ್ಮೆ ಎಡಿಟ್ ಮಾಡಿರಬಹುದು, ಇಷ್ಟಾಗಿಯೂ ನೋಡಿ, ಅಂತಿಮವಾಗಿ ಲೇಖಕನೇ ಅದಕ್ಕೆ ಜೀವ ತುಂಬಬೇಕು. ಅಲ್ಲಮನ ಮಾತಿನಲ್ಲಿ ಹೇಳುವುದಾದರೆ,

ಘನತರ ಚಿತ್ರದ ರೂಪ ಬರೆಯಬಹುದಲ್ಲದೆ
ಪ್ರಾಣವ ಬರೆಯಬಹುದೆ ?

ಆಶಾ : ಕಾವ್ಯದ ಭವಿಷ್ಯ ಆತಂಕದಲ್ಲಿದೆ ಎನ್ನುವ ಮಾತಿಗೆ ನಿಮ್ಮ ಪ್ರತಿಕ್ರಿಯೆ ಏನು ? ಜನಪ್ರಿಯ ಸಂಸ್ಕೃತಿಯ ಮಾದರಿಗಳಿಗೂ ಇತ್ತೀಚಿನ ಕಾವ್ಯಕ್ಕೂ ಏನಾದರೂ ಸಂಬಂಧವಿದೆಯೇ ?

ಕಿ.ರಂ : ೫೦–೬೦ ರ ದಶಕದ ಬೇಂದ್ರೆ, ಕುವೆಂಪು ಕಾಲದ ಕಾವ್ಯದ ಉಬ್ಬರ ಯಾವಾಗಲೂ ಒಂದೇ ಪ್ರಮಾಣದಲ್ಲಿರೋಲ್ಲ, ಬೇಂದ್ರೆ, ಕುವೆಂಪು ಕಾಲದ ಕಾವ್ಯದ ಉಬ್ಬರ ಈಗಿಲ್ಲ ಅಂತಲೇ ಹೇಳಬೇಕು. ಆದರೆ ಕಾವ್ಯ ತನ್ನ ವಲಯವನ್ನೇ ಇವತ್ತು ತುಂಬಾ ವಿಸ್ತರಿಸಿಕೊಂಡಿದೆ ಅಂತ ಅನಿಸಿದೆ ನನಗೆ. ನಮ್ಮ ಕಾಲಘಟ್ಟದ ಹಲವು ಬಗೆಯ ಘರ್ಷಣೆಯ ನೆಲೆಗಳೇ ಕಾವ್ಯದ ತಾತ್ವಿಕ ನೆಲೆಗಳಾಗಿ ರೂಪುಗೊಳ್ತಾ ಇರುವ ಸನ್ನಿವೇಶ ಇದು. ಯಾವ ಹೋರಾಟವೂ ರಾಜಕೀಯ ಅಧಿಕಾರವಿಲ್ಲದೇ ಪೂರ್ಣವಾಗೋದಿಲ್ಲ ಅಥವಾ ನಿಜವಾಗೋದಿಲ್ಲ. ಇವತ್ತಿನ ಸ್ತ್ರೀವಾದಿ ಮತ್ತು ದಲಿತ ಹೋರಾಟಗಳು ಈ ದಿಕ್ಕಿನಲ್ಲಿ ಚಲಿಸ್ತಾ ಇವೆ. ಹೀಗಾಗಿ ನನಗೆ ಇತ್ತೀಚಿನ ಕಾವ್ಯದ ಬಗೆಗೆ ತುಂಬ ಕುತೂಹಲ ಇದೆ. ಇದು ಇನೂ ಬೇರೆ ಬೇರೆ ರೀತಿಯಲ್ಲಿ ವಿಕಾಶಶೀಲವಾಗಬೇಕು. ಸುಗಡೋಣಿ, ಜಯಂತ್, ವಿವೇಕ್, ಎನ್.ಕೆ.ಹನುಮಂತಯ್ಯ, ಲಲಿತಾ ಸಿದ್ಧಬಸವಯ್ಯ, ಜಾಹ್ನವಿ ಮೊದಲಾದವರ ಬರಹಗಳ ಬಗ್ಗೆ ನನಗೆ ತುಂಬ ಕುತೂಹಲ ಇದೆ.

ಇವತ್ತಿನ ಶಿಕ್ಷಣ ಕ್ರಮದ ಬಗೆಗೂ ಕೆಲವು ಮಾತುಗಳನ್ನ ಹೇಳಬೇಕು ಅನಿಸುತ್ತೆ ನನಗೆ. ನಮ್ಮ ಶಿಕ್ಷಣ ಕ್ರಮ ಟೆಕ್ಸ್ಟ್ ಓರಿಯೆಂಟೆಡ್ ಆಗಿಬಿಟ್ಟಿದೆ. ಒಂದು ಸಮುದಾಯದಲ್ಲಿ ಸಾಹಿತ್ಯದ ಅಭಿರುಚಿಯನ್ನು ಬೆಳೆಸುವಲ್ಲಿ ಶಿಕ್ಷಣ ಕ್ರಮದಲ್ಲಿ ನಾವು ಅಳವಡಿಸಬೇಕಾದ ಸಾಹಿತ್ಯಕ್ಕೆ ಮುಖ್ಯವಾದ ಪಾತ್ರ ಇದೆ. ವಿದ್ಯಾರ್ಥಿಯ ಭಾವಸಮೃದ್ಧಿ ಮತ್ತು ಭಾಷಾ ಸಮೃದ್ಧಿಯಲ್ಲಿ ಸಾಹಿತ್ಯ ವಹಿಸುವ ಪಾತ್ರ ದೊಡ್ಡದು. ಆಡುವ, ಕೇಳುವ ಮತ್ತು ಗ್ರಹಿಸುವ ಶಕ್ತಿಯನ್ನು ಕೊಡೋದು ಸಾಹಿತ್ಯವೇ ಅಥವಾ ಅದನ್ನ ಹೀಗೂ ಹೇಳಬಹುದು. ಲೋಕದ ಬಗ್ಗೆ ಅನೇಕ ಅಪಗ್ರಹಿಕೆಗಳು ಮಕ್ಕಳಲ್ಲಿರುತ್ತವೆ. ಈ ಅಪಗ್ರಹಿಕೆಗಳನ್ನ ಕಳೆದು ಲೋಕದ ನೋಡುವಿಕೆಗೆ ಒಂದು ಶಕ್ತಿಯನ್ನು ಒದಗಿಸಿಕೊಡೋದು ಸಾಹಿತ್ಯ. ನಮ್ಮ ಒಳಗೇ ಇರುವ ಕಾವ್ಯವನ್ನ ತೋರಿಸುವ ಶಿಕ್ಷಣ ಕ್ರಮ ಇವತ್ತು ಬೇಕು.



ಜನಪ್ರಿಯ ಸಂಸ್ಕೃತಿ ಅಂತ ವರ್ಗೀಕರಿಸುವುದರಲ್ಲೇ ನನಗೆ ಸಮಸ್ಯೆಗಳಿವೆ. ಸಿನೆಮಾ, ಜಾಹೀರಾತುಗಳು ಇವುಗಳನ್ನ ಜನಪ್ರಿಯ ಅಂತ ವರ್ಗೀಕರಿಸಿಬಿಡೋದ್ರಿಂದ ಏನೂ ಆಗೊಲ್ಲ. ನನ್ನ ಪ್ರಕಾರ ಸಿನೆಮಾಗಳನ್ನ ವಾಣಿಜ್ಯ ಸಿನೆಮಾ, ಕಲಾತ್ಮಕ ಅಂತ ವರ್ಗೀಕರಿಸೋಕ್ಕೆ ಸಾಧ್ಯವಿಲ್ಲ. 'ಗಂಗವ್ವ ಗಂಗಾಮಾಯಿ' ಯಂತ ಕಾದಂಬರಿಯನ್ನು ಸಿನೆಮಾ ಮಾಡುವಾಗ ಅದು ಎಲ್ಲರನ್ನೂ ತಲುಪುವ ಹಾಗೆ ಮಾಡಬೇಕು. ಅಭಿರುಚಿ ಅನ್ನೋದು ದಿಢೀರ್ ಅಂತ ಸೃಷ್ಟಿಯಾಗುವಂತದ್ದಲ್ಲ. ಆತುರದ ಕಾಲದಲ್ಲಿ ವ್ಯವಧಾನವನ್ನು ಕಲಿಸೋದು ಕಲೆಯೇ.

ಆಶಾ : ಕಾವ್ಯಮಂಡಲದ ಮೂಲಕ ನೀವು ಅನೇಕ ಸಾಹಿತ್ಯಕ ಯೋಜನೆಗಳನ್ನು ನಡೆಸುತ್ತಿದ್ದೀರಿ. ಕಾವ್ಯಮಂಡಲದ ಭವಿಷ್ಯದ ಕಾರ್ಯ ಚಟುವಟಿಕೆಗಳೇನು ?

ಕಿ.ರಂ : ಇಡೀ ಕನ್ನಡ ಕಾವ್ಯ ಪರಂಪರೆಯೇನಿದೆ... ಕವಿರಾಜಮಾರ್ಗ, ಜನಪದ ಕಾವ್ಯವೂ ಸೇರಿದಂತೆ ಸಮಕಾಲೀನ ಸಾಹಿತ್ಯದ ತನಕ ಹರಡಿರುವ ಕಾವ್ಯ ಪರಂಪರೆಯ ವಿಕಾಸಶೀಲತೆಯನ್ನು ಅಧ್ಯಯನ ಮಾಡುವ ಆಸಕ್ತರ ಗುಂಪನ್ನು ಕಟ್ಟುವುದರಲ್ಲಿ ಕಾವ್ಯಮಂಡಲಕ್ಕೆ ಆಸಕ್ತಿಯಿದೆ. ವಾಚನಾಭಿರುಚಿಯ ಮೂಲಕ ಕಾವ್ಯವನ್ನು ಪ್ರಸಾರ ಮಾಡುವ ಹೊಸ ಸಾಧ್ಯತೆಗಳನ್ನು ಹುಡುಕುತಿದ್ದೇನೆ. ಕಾವ್ಯ ಪ್ರಸಾರವನ್ನು ನಿರಂತರವಾಗಿ ನಡೆಸುವ ವಲಯವೊಂದನ್ನು ಕಟ್ಟುವುದರ ಕಡೆಗೆ ನನಗೆ ಆಸಕ್ತಿಯಿದೆ.

ಆಶಾ : ಪರಂಪರೆಯನ್ನ ಕಟ್ಟಿಕೊಳ್ಳುವ ಬಗೆಯನ್ನು ನೀವು ನಿರ್ವಚಿಸುವ ಕ್ರಮ ಬಗೆ ?

ಕಿ.ರಂ : ಪರಂಪರೆ ಅನ್ನೋದು ಪಳೆಯುಳಿಕೆಯ ಹಾಗಲ್ಲ. ಅದು ನಾವು ಜೋಡಿಸಿಕೊಳ್ಳಬೇಕಾಗಿರೋದು, ಕಟ್ಟಿಕೊಳ್ಳಬೇಕಾಗಿರೋದು. ಅದನ್ನು ನಾವು ಕಷ್ಟಪಟ್ಟು ಸಂಪಾದಿಸಿಕೊಳ್ಳಬೇಕು. ಅಂತ ಎಲಿಯೆಟ್ ಹೇಳೋದನ್ನ ನಾನೂ ಸಂಪೂರ್ಣವಾಗಿ ಒಪ್ಪುವೆ.

ಆಶಾ : ಅತ್ಯುತ್ತಮ ಕಾವ್ಯ ಅನ್ನೋದು ಯಾವುದು ? ಅದು ಹೇಗಿರುತ್ತೆ.

ಕಿ.ರಂ : ತಾಜಾತನವೇ ಅತ್ಯುತ್ತಮ ಕಾವ್ಯದ ಮೂಲಭೂತ ಲಕ್ಷಣ. ಭಾಷೆ ಮತ್ತು ಸಂವೇದನೆ ಈ ಎರಡರಲ್ಲೂ ತಾಜಾತನ ಇರಬೇಕು ಮತ್ತು ಈ ಎರಡೂ ಸಂಗಮಿಸುವ ಬಿಂದುವೇ ಕಾವ್ಯದ ತಾಜಾತನವನ್ನು ನಿರ್ಧರಿಸುತ್ತದೆ.

ಈ ಮೇಲಿನ ಮಾತುಗಳು ಡಾ.ಆಶಾದೇವಿಯವರು ಕಿ.ರಂ ರವರೊಂದಿಗೆ ನಡೆಸಿದ ಸಂದರ್ಶನದಲ್ಲಿ ಮೂಡಿ ಬಂದ ವಿಚಾರದಾರೆಗಳಾಗಿವೆ.

# ಅಧ್ಯಾಯ – ೫

## ಕಿ.ರಂ ಅವರ ಬದುಕು–ಬರಹ

ಕಿತ್ತಾನೆ ರಂಗಪ್ಪ ನಾಗರಾಜ ಅವರ ಬದುಕು – ಬರಹ ಒಂದು ಸಾಧನೆಯೇ ಸರಿ. ಕಿ.ರಂ ಅವರು ಪಡೆದಿರುವ ಶಿಷ್ಯರನ್ನ ಬೇರೆ ಯಾವ ವಿಮರ್ಶಕರು ಹೊಂದಿಲ್ಲವೆಂದೇ ಹೇಳಬಹುದು. ಒಬ್ಬ ಸಾಹಿತಿಗೆ ಬರಹಗಾರ ನಟರಿಗೆ ಅಭಿಮಾನಿ ಬಳಗ. ಶಿಷ್ಯಬಳಗ ಇರುವುದನ್ನ ಕಾಣುತ್ತೇವೆ. ಆದರೆ ಕಿ.ರಂ.ಅವರು ಒಬ್ಬ ವಿಮರ್ಶಕರಾಗಿ ಅಪಾರ ಶಿಷ್ಯ ಬಳಗವನ್ನ ಹೊಂದಿರುವುದು ಅವರ ಹೃದಯ ವೈಶಾಲ್ಯತೆಯನ್ನು ತೋರುತ್ತದೆ. ಸಹಜವಾಗಿ ವಿಮರ್ಶಕರೆಂದರೆ ನಿಷ್ಠುರವಾದಿಗಳಾಗಿ, ವಿರೋಧಿಗಳಾಗಿ, ಕೋಪಿಷ್ಠರಾಗಿ ಇರುವುದನ್ನ ಕಾಣುತ್ತೇವೆ. ಆದರೆ ಕಿ.ರಂ. ಅವರು ಇವೆಲ್ಲಕ್ಕೂ ಭಿನ್ನವಾದವರು. ಎಲ್ಲರನ್ನೂ ಪ್ರೀತಿಸುವ ಎಲ್ಲರನ್ನೂ ಗೌರವಿಸುವ, ಸರಳ, ಸಜ್ಜನ ಗೌರವಾನ್ವಿತ ವ್ಯಕ್ತಿಯಾಗಿ ಗುರುತಿಸಿಕೊಂಡವರು.

ಕಿ.ರ. ಅವರು ಕೂಡಾ ತಾವು ತಮ್ಮ ದೋರಣೆ ಮತ್ತು ಪ್ರಾಮಾಣಿಕತೆಗೆ ಚುತಿ ಬರದಂತೆ ನೋಡಿಕೊಂಡವರು. ಯಾವುದೇ ಆಸೆ, ಆಮಿಷ, ಪ್ರಶಸ್ತಿ, ಗೌರವಗಳು ಪದವಿಗಳು ಬೇಕೆಂದು ಕೇಳಿದವರಲ್ಲ ಕಿ.ರಂ. ಅವರಿಗೆ ಬಡವ ಶೋಷಿತರನ್ನು ಕಂಡರೆ ಅಪಾರ ಪ್ರೀತಿ.

ಕಿ.ರಂ. ಅವರು ಎಂದೂ ಕೂಡ ತಮ್ಮ ಖಾಸಗಿ ಬದುಕನ್ನ ಕಷ್ಟಗಳನ್ನ ಬೇರೆಯವರ ಮುಂದೆ ಹೇಳಿಕೊಂಡಿಲ್ಲ ಎಂದು ಭಾವಿಸಿದ್ದೇನೆ ಕಾರಣ ಅವರ ಆ ಶಿಸ್ತು ಅವರ ಆ ಮಟ್ಟಕ್ಕೆ ಬೆಳೆಯಲು ಸಾಧ್ಯವಾಗಿದೆ. ಜಾತಿರಹಿತ, ಭಾಷೆರಹಿತ, ಧರ್ಮರಹಿತ ವ್ಯಕ್ತಿ ಎಂದರೆ ಕಿ.ರಂ. ನಾಗರಾಜ ಅವರು.

ಅವರು ಸಮಾಜಕ್ಕೆ ಏನಾದರೂ ಒಳ್ಳೆಯದನ್ನ ಮಾಡಬೇಕೆಂಬ ಹಂಬಲ ಅವರದಾಗಿತ್ತು. ಶೋಷಿತರನ್ನ ಅದರಲ್ಲೂ ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳೆಂದರೆ ಅವರನ್ನ ಪೂರ್ಣ ಕಣ್ಣಿನಿಂದ, ಮನಸ್ಸಿನಿಂದ, ಹೃದಯದಿಂದ ಮಾತನಾಡಿಸುವ ಗುಣ ಕಿ.ರಂ ಅವರದು. ಕಿ.ರಂ. ನಾಗರಾಜ ಅವರು ತಾವು ಸಮಾಜವನ್ನು ಪೂರ್ಣವಾಗಿ ತಿದ್ದಲು ಸಾಧ್ಯವಾದಗಿದ್ದರೂ ಕೊನೆ ಪಕ್ಷ ಉತ್ತಮ ಒಬ್ಬ ಪ್ರಜೆಯನ್ನು ಸಿದ್ಧಮಾಡುವುದು ಮುಖ್ಯ ಎಂದೇ ಭಾವಿಸಿದ್ದರು. ಕಿ.ರಂ.ಅವರು ತಮ್ಮ ಸಾಹಿತ್ಯದುದ್ದಕ್ಕು ತಮ್ಮ ಮಾತುಗಳನ್ನ ಭಾವನೆಗಳನ್ನು 'ಕಾಲಜ್ಞಾನಿ ಕನಕ' ನಾಟಕದಲ್ಲಿ ಕನಕನ ಮಾತುಗಳಾಗಿ ಕಿ.ರಂ. ಮಾತನಾಡುತ್ತಿದ್ದಾರೆ ಎಂದು ಸಹೃದಯರಿಗೆ ಅನ್ನಿಸದೇ ಇರದು.

ಕಿ.ರಂ. ಅವರು ತಮ್ಮ ಭಾವನೆಗಳನ್ನು ಕನಕನ ಮೂಲಕ ಹೇಳಿಸುವ ಪರಿ ಮತ್ತು ತಕ್ಕ ಸನ್ನಿವೇಷಗಳನ್ನು ಕಿ.ರಂ. ಅವರು ತಮ್ಮ ನಾಟಕದಲ್ಲಿ ಸೃಷ್ಠಿಸಿದ್ದಾರೆ. ಬಹಶಃ ಕನಕದಾಸರು ಯಾವ ರೀತಿ ರಾಗಿ – ಭತ್ತಗಳ ಮಧ್ಯೆ ಶ್ರೇಣಿಕೃತ ವ್ಯವಸ್ಥೆಯನ್ನು ಅನಾವರಣಗೊಳಿಸಲು ಪ್ರಯತ್ನಿಸಿದರೊ ಅದೇ ರೀತಿ ಕಿ.ರಂ. ಅವರು ಕಾಲಜ್ಞಾನಿಕನಕ ನಾಟಕದಲ್ಲಿ ಭಾಷೆ, ಜಾತಿ, ಧರ್ಮ, ಮತ, ಮಂದಿರಗಳ ಬಗ್ಗೆ ಜಾಟಿ ಬೀಸಿರುವುದನ್ನು ನಾಟಕದಲ್ಲಿ ಕಾಣುತ್ತೇವೆ. ಕುವೆಂಪು ರವರ 'ಶೂದ್ರತಪಸ್ವಿ' ನಾಟಕ, ಬೆರಳಿಗೆ ಕೊರಳ್, ಸಿದ್ಧಲಿಂಗಯ್ಯರವರ ಏಕಲವ್ಯ ನಾಟಕ, ಕಿ.ರಂ. ಅವರ ನಾಟಕಕ್ಕೆ ಸಮೀಪವಾಗಿದೆ. ವಸ್ತು, ಕಾಲ, ಸಂದರ್ಭಗಳು ಬೇರೆಯಾಗಿರಬಹುದು ಆದರೆ ಒಟ್ಟಿನಲ್ಲಿ ಶೋಷಣೆ ವಿರುದ್ಧವೇ ಕುವೆಂಪು, ಸಿದ್ಧಲಿಂಗಯ್ಯ ಕಿ.ರಂ.ಅವರು ಧ್ವನಿ ಎತ್ತಿದ್ದಾರೆ. ಸಮಾಜದ ಅಂತರಂಗ – ಬಹಿರಂಗಗಳನ್ನ ಬಲ್ಲವರು ಕಿ.ರಂ. ವಚನಕಾರರು, ಶಿವಶರಣ, ಅಲ್ಲಮಪ್ರಭು, ಆಧುನಿಕ ಕವಿಗಳನ್ನ ತಮ್ಮ ಜೋಳಿಗೆಯಲ್ಲಿಟ್ಟು ಬೆಳೆಸಿದವರು ಕಿ.ರಂ.

ಕಿ.ರಂ. ಮತ್ತು ಕುಲದ ಪ್ರಶ್ನೆ, ಒಮ್ಮೆ ಕಿ.ರಂ. ಅವರನ್ನು ತಮ್ಮ ಜಾತಿಯಾವುದೆಂದು ಅವರ ಮನೆಯಲ್ಲಿ ಸಹಜವಾಗಿ ಕೇಳಿದೆ. ಬಹುಶಃ ಅವರು ತನ್ನಿಂದ ಈ ಪ್ರಶ್ನೆಯನ್ನು ನಿರೀಕ್ಷಿಸಿರಲಿಲ್ಲ. ಕಣ್ಣು, ಕಿವಿ, ಅಗಲವಾದಾಗ ನನಗೆ ಒಮ್ಮೆ ಭಯವಾಯಿತು. ಕಿ.ರಂ. ನನಗೆ ಉತ್ತರಿಸಿದ್ದು ನನಗೆ ಜಾತಿಯಿಲ್ಲ. ನಿಮ್ಮ ಜಾತಿ ಎಂದೇ ತಿಳಿಯಿರಿ ಎಂದು ಸೌಮ್ಯವಾಗಿ ಉತ್ತರಿಸಿದರು. ಆಗ ಬಸವಣ್ಣ ನನಗೆ ನೆನಪಿಗೆ ಬಂದರು ಈ ರೀತಿ ಅನೇಕ ವಿಷಯಗಳನ್ನು, ವಸ್ತುಗಳನ್ನು ಅದರಲ್ಲೂ ಜಾಗತೀಕರಣವನ್ನು ಕಿ.ರಂ. ವಿರೋಧಿಸುತ್ತಿದ್ದರು. ಅವರಿಗೆ ಸಂಗೀತ, ಕ್ರಿಕೇಟ್ ಎಂದರೆ ಪ್ರಾಣ. ಕೆಲವೊಮ್ಮೆ ಕ್ರಿಕೇಟ್ ಇದ್ದರೆ ಪೋನ್ ಸುಚ್‌ಆಫ್ ಮಾಡಿ ಕ್ರಿಕೇಟ್ ನೋಡುತ್ತಿದ್ದರು. ಕಿ.ರಂ. ಹಣಕ್ಕೆ ಎಂದೂ ಬೆಲೆ ಕೊಟ್ಟವರಲ್ಲ, ವ್ಯಕ್ತಿ ಗುಣಗಳಿಗೆ ಬೆಲೆ ಕೊಟ್ಟವರು ಬಹುಶಃ ಕಿ.ರಂ. ಬಳಿ ಓದದೇ ಬರೆಯದೇ ಮಾತಿಗೆ. ಚರ್ಚೆಗೆ ಯಾರಾದರೂ ನಿಂತರೆ ಎಂಥಹ ವ್ಯಕ್ತಿಯಾಗಿದ್ದರೂ ಮುಖದ ನೀರನ್ನು ಇಳಿಸಿ ಓದಿಕೊಂಡು ಬರಲು ಬುದ್ಧಿ ಹೇಳುತ್ತಿದ್ದರು. ಓದುವವರು ಬರೆಯುವವರೆಂದರೆ ಅವರಿಗೆ ಪ್ರಾಣ. ಒಬ್ಬ ಬಡ ವಿದ್ಯಾರ್ಥಿಗೆ ಫೀ ಕಟ್ಟಲು ಹಣವಿಲ್ಲವೆಂದಾಗ ತಾವೇ ತಮ್ಮ ಸಂಬಳದಿಂದ ಕಟ್ಟಲು ಮುಂದೆ ಬಂದಿದ್ದರು. ಈ ರೀತಿ ಓದುವ ವಿದ್ಯಾರ್ಥಿ ಕಷ್ಟದಲ್ಲಿರುವವರನ್ನು ಪ್ರೀತಿಸುವಗುಣ ಕಿ.ರಂ. ಅವರದು. ಕಿ.ರಂ ಅವರು ಪಿ.ಹೆಚ್.ಡಿ ಪಡೆಯದೇ ಇರಬಹುದು ಆದರೆ ಅವರ ವಿಚಾರ ಮಂಥನ ಮುಂದಿನ ಯುವ ಪೀಳಿಗೆ ಸಾವಿರ ಪಿ.ಹೆಚ್.ಡಿ. ಮಾಡಬಹುದಾದಷ್ಟು ವಿಚಾರವನ್ನ ನಮ್ಮ ಮುಂದಿಟ್ಟಿದ್ದಾರೆ.

ಕಿ.ರಂ.ಅವರು ಎಂದೂ ಕೂಡ ಬಹಿರಂಗವಾಗಿ ಧೂಮಪಾನ ಮಾಡಿದವರಲ್ಲಿ ಎಂಥಹ ಕಿರಿಯರೇ ಇರಲಿ ಪಕ್ಕದಲ್ಲಿ ಹೋಗಿ ಮಾಡುತ್ತಿದ್ದರೇ ಹೊರತು ಬಹಿರಂಗವಾಗಿ ಎಂದು ಸೇದಿದವರಲ್ಲ. ನೆಸ್ಸೆಯನ್ನು ಏರಿಸುವ ಚಟ ಇತ್ತಾದರೂ ಎಂದೂ ತೋರಿಸಿಕೊಂಡವರಲ್ಲ. ಅವರ ಧ್ಯೇಯ–ಉದ್ದೇಶ ಈ ಸಂಸ್ಥೆಯ ಮುಖಾಂತರ ಜನ ಸಾಮಾನ್ಯರಿಗೆ ಇದರ ಪ್ರಯೋಜನವಾಗಲಿ ಎಂಬುದೇ ನಮ್ಮೆಲ್ಲರ ಆಶಯ ಅವರ ಶಿಷ್ಯ ಬಳಗ ಆ ನಿಟ್ಟಿನಲ್ಲಿ 'ಕಾವ್ಯ ಮಂಡಲವನ್ನು' ಬೆಳೆಸಲು ಪ್ರಾಮಾಣಿಕ ಪ್ರಯತ್ನ ಮಾಡುತ್ತಿರುವುದು ಕಿ.ರಂ. ಅವರ ಮೇಲಿನ ಪ್ರೀತಿ, ಕಿ.ರಂ. ಅವರ ಉದ್ದೇಶ ಈಡೇರಲೆಂದೇ ಎಲ್ಲರ ಆಶಯವಾಗಿದೆ.

ಕಿ.ರಂ. ಅವರ ಮಾತುಗಳು ಕನಕನ ಮುಖಾಂತರ ಸಮಾಜ ಮುಖಿ ಚಿಂತನೆಯಲ್ಲಿ ಮೂಡಿರುವುದನ್ನು ಈ ಕೆಳಗಿನ ನಾಟಕದ ಸಾಲಿನಲ್ಲಿ ಕಾಣಬಹುದು.

ಕನಕ : ನನ್ನ ಪ್ರೀತಿಯ ನಾಡಿನ ಬಾಂಧವರೇ, ಅಲ್ಲ, ಅಲ್ಲ.. ಗೆಳೆಯರೆ, ಮನುಷ್ಯ ವೃಕ್ಷದ ಹೂವು ಹಣ್ಣುಗಳೇ, ನಿಮ್ಮ ಪ್ರೀತಿಯ ಸ್ವಾಗತಕ್ಕೆ ನಾನು ಅರ್ಹನಲ್ಲ. ನನ್ನ ಪರಾಕ್ರಮವನ್ನು ಕುರಿತು ಹಾಡಿ ಹೊಗಳಿದ್ದೀರಿ. ಇದಕ್ಕೆ ನಾನು ಕೃತಜ್ಞತೆಗಳನ್ನು ಸೂಚಿಸಬೇಕೋ, ನಿರಾಕರಿಸಬೇಕೋ, ಮೌನದಿಂದ ಇರಬೇಕೋ ಏನೊಂದೂ ತಿಳಿಯುತ್ತಿಲ್ಲ. ಈವರೆಗೂ ಅಧಿಕಾರದ ಮದದಿಂದ ನಾನು ಮಲೆತಿದ್ದೆ. ಅಹಂಕಾರ ನನ್ನಲ್ಲಿ ಗೂಡು ಕಟ್ಟಿತ್ತು. ಯುದ್ಧದಲ್ಲಿ ತೋರುತ್ತಿದ್ದ ನನ್ನ ತೋಳುಬಲಕ್ಕೆ ಈಗ ತಾನೇ ಧಿಕ್ಕಾರ ಹಾಕಿ ಕೂಗಬೇಕೆನಿಸುತ್ತಿದೆ. ಪರಾಕ್ರಮದ ಬಗ್ಗೆ ನನ್ನಲ್ಲಿ ಅಸಹ್ಯ ಹುಟ್ಟಿದೆ. ಯುದ್ಧ, ಮಾನವ ಲೋಕದ ಮಾಯದ ಗಾಯ. ಲೋಕ, ಯುದ್ಧದಿಂದ ಮುಕ್ತವಾಗಬೇಕೆನ್ನುವ ಭಾವನೆ ನನ್ನನ್ನು ಆವರಿಸುತ್ತಿದೆ. ಅಂಥ ಚೈತನ್ಯ ನನ್ನಲ್ಲಿ ಪಿಸುಗುಟ್ಟುತ್ತಿದೆ. ನನ್ನ ಒರೆಯಲ್ಲಿ ಪ್ರೇಮ, ಯುದ್ಧ ಎರಡೂ ಇದ್ದವು. ಆದರೆ, ಪ್ರೇಮವನ್ನು ಮರೆತು ಯುದ್ಧದ ಖಡ್ಗಕ್ಕೆ ಮಾರುಹೋಗಿದ್ದೆ. ನನ್ನ ಕಣ್ಣು ಕಿವಿಗಳು ಪ್ರೇಮವನ್ನು ನೋಡಲಿಲ್ಲ, ಕೇಳಲಿಲ್ಲ.

ಕನಕ : ನಿಮಗೆ ಯಾವುದೇ ದಾರಿ ತೋರಿಸುವ ಶಕ್ತಿ ಈಗ ನನ್ನಲ್ಲಿಲ್ಲ. ನೀವೆಲ್ಲ ನನ್ನನ್ನು ನಾಯಕ ಅಂತ, ಪ್ರಭು ಅಂತ, ತಿಳಿದ್ದೀರಿ. ಆದರೆ ನಾನು ನನ್ನ ಹುಡುಕಾಟದಲ್ಲಿ ತೊಡಗಿದ್ದೇನೆ. ನಾನು ಶಾಸ್ತ್ರ ಓದಿದೆ, ಕಾವ್ಯಗಳನ್ನು ಓದಿದೆ, ಬರೆದೆ. ಆದರೆ ನನ್ನ ಮನಸ್ಸಿಗೆ ಹತ್ತಿದ ಸಂಶಯ ಮಾತ್ರ ಕಳೆಯಲಿಲ್ಲ. ನನಗೆ ಉಪದೇಶ

ಕೊಡಲು ಶಕ್ತಿಯೂ ಇಲ್ಲ, ಇಚ್ಛೆಯೂ ಇಲ್ಲ ಅಂಥವರು ಅನೇಕರು ಸಿಕ್ಕಿಯಾರು, ಆದರೆ ಯಾರೂ ಆ ಕಾಯಕವನ್ನು ತೋರಿಸಲಿಲ್ಲ. ಆದ್ದರಿಂದ ನನಗೆ ನಾನೇ ಆಗಿ ಹೊರಟಿದ್ದೇನೆ.

ಕನಕ : ಮನುಷ್ಯನ ಬದುಕಿಗೆ ಪರಾಕ್ರಮದಿಂದ ಆಗಬೇಕಾದದ್ದು ಏನೂ ಇಲ್ಲ, ಯುದ್ಧ ಹಿಂಸೆಗಳಿಲ್ಲದೆ, ಆಯುಧಗಳ ಅಹಂಕಾರವಿಲ್ಲದೆ ಮನುಷ್ಯ ಬದುಕಬಹುದು.

ಕನಕ : ಆ ಭಯ ಬಿಟ್ಟುಬಿಡಿ, ಭಯ ತುಂಬಿದ ವಾತಾವರಣದಲ್ಲಿ, ನಮ್ಮದೇ ಆದ ಭಾವನೆಗಳು ಹುಟ್ಟೋದಿಲ್ಲ, ಭಯ ಇರೋ ಕಡೆ ಪ್ರೀತಿಗೆ ಅವಕಾಶವಿಲ್ಲ, ಭಯವನ್ನು ಕಿತ್ತು ಹಾಕಿ. ಆಗ ಯಾವ ಕ್ರೌರ್ಯವೂ ನಿಮ್ಮನ್ನು ಕಾಡುವುದಿಲ್ಲ. ನಿಮ್ಮಲ್ಲಿರುವ ಪ್ರೀತಿಯಿಂದ ಭಯವನ್ನು ಮಣಿಸಬಹುದು.

ಕನಕ : ಯುದ್ಧ ಮುಗ್ಧರನ್ನು, ಅರಳುವ ಪೀಳಿಗೆಯನ್ನು ನಾಶ ಮಾಡುತ್ತೆ. ಹೀಗೇ ಯುದ್ಧ ಮುಂದುವರೀತಿದ್ದರೆ ಜಗತ್ತು ಒಂದು ದಿನ ಮನುಷ್ಯರೇ ಇಲ್ಲದ ಮರುಭೂಮಿ ಆಗುತ್ತೆ. ಇದು ನಾನು ಕೇಳಿರುವ ಕಾಲಜ್ಞಾನ. ನಾನು ತಿಳಿಯಬೇಕಾಗಿರುವ ಕಾಲಜ್ಞಾನ. ಇದು ಈ ಕಾಲದ ಜ್ಞಾನ. ದಯವಿಟ್ಟು ಕ್ಷಮಿಸಿ, ನನ್ನ ಮಾತು ನಿಮಗೆ ನಿಮಗೆ ಅಪಥ್ಯ ಆಗಿದ್ದರೆ ಕ್ಷಮಿಸಿ. ಮನುಷ್ಯನ ಬದುಕಿನ ತೊಂಬತ್ತು ಭಾಗ ಯುದ್ಧಾನೆ ತುಂಬಿಕೊಂಡಿದೆ. ಪ್ರಳಯ ಅನ್ನೋದು ಬೇರೆ ಯಾವುದೂ ಅಲ್ಲ. ಯುದ್ಧವೇ ಒಂದು ಭೀಕರ ಪ್ರಳಯ. ಎಲ್ಲವನ್ನೂ ಸುಟ್ಟುಹಾಕುವ ಬೆಂಕಿ. ಅದೊಂದು ನಂದಿಸಲಾಗದ ಬೆಂಕಿ. ಇನ್ನು ನಾವು ಮನುಷ್ಯರಾಗಿರೋದು ತುಂಬ ದೂರ ಉಳಿಯಿತು. ಎಲ್ಲ ಸುಟ್ಟು ನಾಶವಾಗ್ತಾ ಇರೋವಾಗ ನಮ್ಮ ಅಂತರಂಗದಲ್ಲಾದರೂ ಒಂದು ಗಿಡ ನೆಟ್ಟು ಪ್ರೀತಿಯ ಒಂದು ಹೂವು ಅರಳಿಸೋಣ.

ಕನಕ : ಜನರನ್ನು ಕಾಯೋ ರಾಜರಿಂದ ಲಾಭ ಆಗೋದು ರಾಜನಿಗೆ. ಯುದ್ಧ, ಕೊಲೆ, ಸುಲಿಗೆ ನಡೆಯೋದು ಅವರ ಕಾರಣದಿಂದಲೇ. ಜನರನ್ನು ಕಾಪಾಡ್ತೇವೆ ಅನ್ನೋ ಅಹಂಕಾರದಿಂದ ಬೀಗುವವರಿಂದ ಯಾವ ರಕ್ಷಣೆ ಆಗುತ್ತೆ ? ಪ್ರಜೆಗಳ ಸ್ಥಿತಿ ಹಾಗೇ ಉಳಿಯುತ್ತೆ. ಅಷ್ಟೇ ಯಾಕೆ ? ಇನ್ನೂ ಕಡೆಯಾಗುತ್ತೆ.

ಕನಕ : ಛೆ.. ಛೆ.. ಇದು ತಮಾಷೆ ಮಾತು. ನಾವು ಕುರಿಗಳು ನಿಜ. ಆದರೆ ನಮ್ಮನ್ನು ಕಾಯುವ ಕುರುಬ, ರಾಜ ಅಲ್ಲ, ಅವನನ್ನು ಮೀರಿಸೋ ರಾಜ ಇದಾನೆ. ಕುರಿಗಳನ್ನು ಕಾಯುವ ಕಲೆ ಗೊತ್ತಿರುವ ಅಜ್ಜ ಅವನು. ಅವನ ಹಾಗೆ ಕುರಿಗಳನ್ನು ಕಾಯೋ ಕಲೆ ಈ ರಾಜರಿಗೆಲ್ಲಿ ತಿಳಿಯುತ್ತೆ ? ರಾಜಕೀಯವನ್ನು ಮೀರೋ ಕಾಯಕ ಅಜ್ಜನದು. ಕುರಿಗಳನ್ನು ಕಾಯುವುದಾಗಲೀ, ಅವುಗಳನ್ನು ಜೋಪಾನವಾಗಿ ರಕ್ಷಿಸುವುದಾಗಲೀ ಅಷ್ಟು ಸುಲಭ ಅಲ್ಲ, ಕುರಿ.. ಮುಗ್ಧತೆಗೆ ಒಂದು ಸಂಕೇತ. ಮನುಷ್ಯ ಮನುಷ್ಯರ ನಡುವೆ ಬೆಚ್ಚನೆಯ ಸಹಬಾಂಧವ್ಯಕ್ಕೆ ಅದು ಸಂಕೇತ. ಪ್ರಾಣಿಗಳಾಗಲೀ, ಕೀಟಗಳಾಗಲೀ, ಸಸ್ಯಗಳಾಗಲೀ ನಮ್ಮ ನಡುವೆ ಇರಬೇಕಾದ ಪ್ರೀತಿಯನ್ನು ಹತ್ತಿರಕ್ಕೆ ತರುತ್ತೆ. ಇವೆಲ್ಲದರ ನಡುವೆ ಇರೋ ಸತ್ಯ ಒಮ್ದೇ. ಅದರ ಯುದ್ಧ ಸೃಷ್ಟಿ ಆಗಿರೋದು ಮನುಷ್ಯನಿಂದ. ಈ ಯುದ್ಧದಿಂದ ಮನುಷ್ಯ ನಾಶ ಆಗೋದರ ಜೊತೆಗೆ ಅವನಿಗೆ ಹತ್ತಿಕೊಂಡಿರುವ ಎಲ್ಲಾ ಸಂಬಂಧಗಳೂ ನಾಶವಾಗುತ್ತವೆ. ಈಗ ನನಗೆ ಉಳಿದಿರೋದು ಸೃಷ್ಟಿಯ ವಿಸ್ಮಯಗಳನ್ನು ರಹಸ್ಯಗಳನ್ನು ತಿಳಿಯೋ ಕೆಲಸ. ಈ ಅಧಿಕಾರ ಬಿಟ್ಟು ಅಲೆಮಾರಿಯಾಗಿ ಹೋಗೋದು. ಮನುಶ್ಃಯ ಪ್ರೀತಿಯ ಮದ್ಯೆ ನಿಂತು ವಿಕಾಸದ ದಾರಿ ಹುಡುಕೋದು.. ನೀವು ನಿಮ್ಮ ನಿಮ್ಮ ಜೀವನದ ಸಂತೋಷವನ್ನು ಕಂಡುಕೊಳ್ಳಿ.

ಕನಕ : ವಂದನೆಗಳು ಬನ್ನಿ

ಕನಕ : ನೀವು ಯಾರು ? ನನ್ನಿಂದ ನಿಮಗೇನು ಆಗಬೇಕಿತ್ತು ?

ಕನಕ : ಸರಿ.. ಸರಿ.. ತುಂಬ ಸಂತೋಷ, ಎಲ್ಲರೂ ಅವರ ರೀತೀಲಿ ಜ್ಞಾನ ಸಂಪಾದನೆ ಮಾಡ್ತಾರೆ. ವಿದ್ಯೆಯಿಂದ ಅವಿದ್ಯೆ ತೊಲಗಬೇಕು. ಜ್ಞಾನದ ಬಲದಿಂದ ಅಜ್ಞಾನಕ್ಕೆ ಕೇಡು ಬರಬೇಕು. ಅದೇ ತಾನೆ ವಿದ್ಯೆಯಿಂದ ಆಗೋದು ?

ಕನಕ : ಹಾಗೇನೂ ಇಲ್ಲ. ಮನುಷ್ಯರ ಅಸ್ತಿತ್ವ ಕುರಿತು, ಪ್ರಕೃತಿಯ ವಿಸ್ಮಯ ಕುರಿತು, ದೇವರನ್ನು ಕುರಿತು ಪರಸ್ಪರ ವಿಚಾರ ವಿನಿಮಯ ಮಾಡ್ಕೊಳ್ಳೋಕೆ ಅನೇಕರು ಬಂದು ಸೇರ್ತಾರೆ. ಅವರ ಜೊತೆ ನಾನೂ ಸೇರ್ತೀನಿ.

ಕನಕ : ನೋಡಿ.. ಹೀಗೆಲ್ಲಾ ವಿನಾ ಕಾರಣ ಮಾತನಾಡಬಾರದು. ನಾನು ಇಲ್ಲಿಗೆ ಯಾರನ್ನೂ ಎಳೆದುಕೊಂಡು ಬಂದಿಲ್ಲ. ಗಹನವಾದ ವಿಚಾರಗಳನ್ನು ತಿಳಿಯೂ ಇಚ್ಛೆ ಎಲ್ಲರಿಗೂ ಇರುತ್ತೆ. ಜ್ಞಾನಾಸಕ್ತಿಯನ್ನು ಬೆಳೆಸಿಕೊಳ್ಳೋದು ಅವರು, ಇವರು ಅನ್ನದೆ ಎಲ್ಲ ಮನುಷ್ಯರ ಪ್ರವೃತ್ತಿ. ನಮ್ಮನ್ನು ನಾವು ತಿಳಿಯೋದೇ ಇಲ್ಲಿ ಮುಖ್ಯ. ಹಾಗೆ ತಿಳಿಯುತ್ತಾ ಸುತ್ತಣ ನಿಜಗಳನ್ನು ತಿಳಿಯೋದು ನಮ್ಮ ಎಲ್ಲರ ಗುರಿ. ಹಾಗೆ ಆಗಬೇಕು ಅನ್ನೋದೆ ನಮ್ಮೆಲ್ಲರ ಬಯಕೆ.

ಕನಕ : ನೀವು ಹೇಳೋದು ನನಗೆ ಗೊತ್ತಿಲ್ಲ, ನನಗೆ ನನ್ನ ಜನಗಳನ್ನು ತಿಳಿಯೋದು ಬೇಕು. ಮನುಷ್ಯ ತನ್ನ ಸುತ್ತಣ ವಿಸ್ಮಯವನ್ನು, ಆಗು–ಹೋಗುಗಳನ್ನು ತಿಳಿಯೋದು ಬೇಕು. ಹಾಗೆ ತಿಳಿದು ಮೊದಲು ನಾವು ಮನುಷ್ಯರಾಗಬೇಕು. ಹಾಗಾಗದಿದ್ದರೆ ನಾವೆಲ್ಲ ಮನುಷ್ಯರಾಗಿ ಉಳಿಯೋದು ಹೇಗೆ ? ಹೇಳಿ.

ಕನಕ : ನನಗೆ ಈ ನಿಮ್ಮ ಚರ್ಚೆಯಲ್ಲಿ ಯಾವ ಹುರುಳು ಕಾಣಿಸ್ತಾ ಇಲ್ಲ. ಇದೆಲ್ಲಾ ಅಲ್ಲ ನನ್ನ ಮಾತು. ಚರ್ಚೆ ಆದರೂ ಯಾಕೆ ಬೇಕು ? ದ್ವೇಷದ ಮಾತನಾಡಿದ ಕೂಡಲೆ ಎಲ್ಲ. ಚರ್ಚೆನೂ ಇಲ್ಲವಾಗುತ್ತೆ. ಚರ್ಚೆಯ ಕೊನೆ ಯಾವಾಗಲೂ ವಾದ, ವಿಕಾರಗಳಿಗೆ ದಾರಿಮಾಡಿ ಕೊಡುತ್ತೆ. ಇಂತಹ ವಿಕಾರ, ಜ್ಞಾನದ ದಾರಿಯಲ್ಲಿ ದೊಡ್ಡ ಅಡ್ಡಿ.

ಕನಕ : ಜ್ಞಾನಿ ಅಂತ ಹೇಳ್ಕೊಂಡು ಓಡಾಡೋನಲ್ಲ ನಾನು. 'ನಾನು' ಅನ್ನೋದೆ ಒಂದು ದೊಡ್ಡ ಸುಳ್ಳು. ಅದೊಂದು ಭ್ರಮೆ. ನಾವೆಲ್ಲ ಸೇರಿ ಚಿಂತನೆ ನಡೆಸೋಣ. ನಿಮಗೆ ಬೇಕಾದರೆ ಬರ್ತೀನಿ. ಇಲ್ದೇ ಇದ್ರೆ.....

ಕನಕ : ಭಾಷೆ ಜಗಳ ನನಗೆ ಬೇಕಿಲ್ಲ. ನನಗೆ ತಿಳಿಯೋದು ಕನ್ನಡ. ನಾನು ಬರೆಯೋದು, ನಾನು ಯೋಚಿಸೋದು...... ನಾನು ಕನಸು ಕಾಣೋದು ಕನ್ನಡದಲ್ಲೇ...

ಕನಕ : ನಾನು ಯಾರ ವಿರೋಧಿಯೂ ಅಲ್ಲ. ಕೊಂಕು ಮಾಡೋದು ನನಗೆ ಸಲ್ಲದ ವಿಚಾರ.

ಕನಕ : ನೀವು ಸರಿಯಾಗಿ ತಿಳಿದಿಲ್ಲ. ಬ್ರಹ್ಮಜ್ಞಾನ ತಿಳಿಯದೆ ಮಾತಾಡುವ ಡಾಂಭಿಕರನ್ನು

ವಿರೋಧ ಮಾಡಿದ್ದೇನೆ. ನೇಮ ಇಲ್ಲದೆ ಜಪ ತಪ ಮಾಡುವವರನ್ನು ಕುರಿತು ವ್ಯಂಗ್ಯದ ಮಾತು ಆಡಿದ್ದೇನೆ. ಭಕ್ತಿ ಆಗಲಿ, ನಿಷ್ಠೆ ಆಗಲಿ ಇಲ್ಲದವರನ್ನು ಕುರಿತಮಾತು ಅದು.

ಕನಕ : ಕ್ಷಮಿಸಬೇಕು. ಕಲುಷಿತ ಭಾವನೆಯಿಂದ ಮಾಡೋ ಜಪ ತಪಗಳಿಗೆ ಯಾವ ಬೆಲೆಯು ಇಲ್ಲ ಅನ್ನೋದಾದರು ನಿಜತಾನೆ ?

ಕನಕ : ಯಾರಿಗೆ ಅಂತರಮ್ಗದಲ್ಲಿ ಶಕ್ತಿ ಇದೆಯೋ ಅವರು ಮಾತ್ರ ಮುಕ್ತರಾಗ್ತಾರೆ, ಉಪದೇಶ ಮಾಡಲು ನಾನೆಷ್ಟರವನು ? ಒಬ್ಬರು ಮತ್ತೊಬ್ಬರನ್ನು ಉಪದೇಶ ಮಾಡ್ತಾರೆ ಅನ್ನುವುದರಲ್ಲಿ ನನಗೆ ನಂಬಿಕೆ ಇಲ್ಲ. ಅಹಂಕಾರ, ಮೇಲು–ಕೀಳು ಇವುಗಳ ಒಳಹೊರಗುಗಳನ್ನು ಕುರಿತು ಕವಿತೆ ಮಾಡಿ ಹಾಡ್ತಾ ಇದೇನೆ. ನಿಮಗೆ ಇಚ್ಚೆ ಇದ್ದರೆ ನನ್ನ ಅಲ್ಪಮತಿಗೆ ತಿಳಿದ ವಿಚಾರಗಳನ್ನು ನಿರೂಪಿಸಿತ್ತೇನೆ. ದಯವಿಟ್ಟು ಲಾಲಿಸಬೇಕು.

ಕನಕ : ಇಷ್ಟೆಲ್ಲ ಕಷ್ಟ ಯಕೆ ? ತೊಗೊಂಡಿರಿ ?

ಕನಕ : ಸರಿ. ಸರಿ. [ಕೈಗೆ ಅಂಬಲಿಯ ಮಡಕೆಯನ್ನು ತೆಗೆದುಕೊಂಡು ಪಂಡಿತರ ಕಡೆಗೆ ತಿರುಗಿ] ಹುಡುಗರು ಪ್ರೀತಿಯಿಂದ ತಂದಿರುವ ಅಂಬಲಿ. ನೀವೂ ಸ್ವಲ್ಪ.....

ಕನಕ : ಇನ್ಯಾವುದು ? ಜನ ದಿನ ನಿತ್ಯ ಕುಡಿಯೋ ರಾಗಿ ಅಂಬಲಿ.

ಕನಕ : ಹಾಗದರೆ... ರಾಮನ ಮುಂದೆ ನಡೆದ ಒಂದು ಜಗಳದ ಕತೆ ಕೇಳಿ ರಾಗಿ ಮಹಾತ್ಮೆ ಅಂದರೆ ಏನು... ಅಂತ ಗೊತ್ತಾಗುತ್ತೆ.

ಕನಕ : ಅದೆಲ್ಲ ಅಲ್ಲ. ರಾಮನ ಮುಂದೆ ಅಕ್ಕಿ ರಾಗಿಗಳ ನಡುವೆ ಒಂದು ದೊಡ್ಡ ಜಗಳ ನಡೆಯಿತು. ರಾಮ ಹನುಮಂತನ ಜೊತೆ ಬರ್ತಾ ಇರೋವಾಗ...

ಕನಕ : ನೋಡಿ. ನೀವು ಹೀಗೆಲ್ಲಾ ಅಡ್ಡ ಮಾತು ತೆಗೆದರೆ ನಾನು ಏನನ್ನೂ ಹೇಳೋಲ್ಲ.

ಕನಕ : ರಾಮನ ಸುತ್ತ ಅನೇಕ ಧಾನ್ಯಗಳು ಸೇರಿದ್ದವು. ಆಗ ನವಧಾನ್ಯಗಳಲ್ಲಿ ಯಾವುದು ಶ್ರೇಷ್ಠ ಅನ್ನೋ ಪ್ರಶ್ನೆ ಬಂತು.

ಕನಕ : ರಾಮನ ಮುಂದೆ ಸೇರಿದ ಧಾನ್ಯಗಳಲ್ಲಿ ಒಂದಾದ ರಾಗಿಯನ್ನು ಕುರಿತು ಗೌತಮ ಮುನಿಗಳು ನಾಲ್ಕು ಒಳ್ಳೆಯ ಮಾತು ಆಡಿದರು. ಅಷ್ಟರಲ್ಲೇ ನೆಲ್ಲು ಅಂದರೆ ಅಕ್ಕಿಗೆ ಉಗ್ರ ಕೋಪ ಬಂತು.

ಕನಕ : [ತನ್ನ ಸಂಗಡಿಗರ ಕಡೆ ತಿರುಗಿ] ನೋಡಿ... ಇವರು ಹೇಗೆ ಕೋಪಿಸಿ ಕೊಂಡು ಮಾತಾಡ್ತಾ ಇದಾರೋ ಹಾಗೇ ಅಕ್ಕಿಗೂ ಕೋಪ ಬಂದಿತ್ತು.

ಕನಕ : ಪಂಡಿತರೇ, ನೀವು ನಿಮ್ಮ ವಾದ ಮಂಡಿಸಿ.

ಕನಕ : ರಾಮನ ಆಜ್ಞೆ ಮೀರಲಾರದೆ ಅಕ್ಕಿ ಜೊತೆ ರಾಗೀನೂ ಹೋಗಿ ಸೆರೆಮನೆ ಸೇರಿತು. ಸೆರೆಮನೇಲಿ ಇವರಿಬ್ಬರನ್ನು ಬೇರೆ ಬೇರೆ ಇಟ್ಟರು.

ಕನಕ : ಆರು ತಿಂಗಳು ಕಳೆಯಿತು. ವಿವೇಕಿಗಳು ತುಂಬಿದ ದೊಡ್ಡ ಸಭೆ ಸೇರಿತು. ಅಲ್ಲಿಗೆ ರಾಮ ಅಕ್ಕೀನ, ರಾಗೀನ ಬರಮಾಡಿಕೊಂಡ.

ಕನಕ : ಕಾರಣ ಇಲ್ಲದೆ ತೀರ್ಪು ಕೊಡುವವನಲ್ಲ ರಾಮ, ಸೆರೆಮನೆಯಿಂದ ಹೊರಗೆ ಬಂದ ರಾಗಿ, ಒಂದು ರಾಗಿಕಾಳಿನಷ್ಟು ಕಾಂತಿ ಕಳೆದು ಕೊಳ್ಳಲಿಲ್ಲ. ಅದರ ಶಕ್ತಿ ಕಡಿಮೆ ಆಗಲಿಲ್ಲ. ಆದರೆ ಅಕ್ಕೀನೋ...

ಕನಕ : ಆ ಮುಗ್ಗಿದ ವಾಸನೆಗೆ ಸಭೆಯಲ್ಲಿದ್ದವರೆಲ್ಲಾ ಮೂಗು ಮುಚ್ಚಿಕೋ ಬೇಕಾಯ್ತು. ಧಾನ್ಯಗಳಲ್ಲೆಲ್ಲಾ ರಾಗೀನೆ ಶ್ರೇಷ್ಠ ಅನ್ನೋ ತೀರ್ಮಾನ ಆಯ್ತು. ಸ್ವಲ್ಪ ಗಮನಿಸಿ. ರಾಘವನ ಹೆಸರಿನ ಒಂದು ಅಂಶ ರಾಗಿ ಅನ್ನೋ ಹೆಸರಿನ ಒಂದು ಅಂಶ ರಾಗಿ ಅನ್ನೋ ಹೆಸರಿನಲ್ಲು ಇದೆ. ರಾಘವ ಅನ್ನೋ ಹೆಸರಿನ ಸಂಕ್ಷಿಪ್ತ ರೂಪಾನೇ ರಾಗಿ, ರಾಗಿ ಅಂದರೆ ಬರಿ ಧಾನ್ಯ ಅಲ್ಲ.

ಕನಕ : ರಾಗಿ ಅಂದರೆ ಪ್ರೀತಿ ಅನ್ನುವ ಅರ್ಥ ಇದೆ. ಬಡವರ ಪ್ರೀತಿಗೆ ಪಾತ್ರವಾದ ಧಾನ್ಯ ಅದು.

ಕನಕ : ವಿಚಾರವಂತರು ಒಪ್ಪಿದ್ದು ನಿಮ್ಮ ತಲೆಗೆ ಹೋಗೋದು ಕಷ್ಟವೆ. ತಿಳಿದವರನ್ನು ಒಪ್ಪಿಸಬಹುದು. ಆದರೆ ಅಲ್ಪ ತಿಳಿದವರನ್ನು ಒಪ್ಪಿಸೋದು ಆ ಬ್ರಹ್ಮನಿಗೂ ಸಾಧ್ಯವಿಲ್ಲ.

ಕನಕ : ಆ ಯಾವ ಇಚ್ಚೆಯೂ ನನಗಿಲ್ಲ. ದೇವಸ್ಥಾನದಲ್ಲೆ ದೇವರಿದ್ದಾನೆ ಅಂತ ನಾನು ತಿಳಿದಿಲ್ಲ. ಬಹಿರಂಗದ ಜಂಜಾಟಕ್ಕೆ ಸಿಲುಕಿದ ಜನ ತಮ್ಮ ಮನಸ್ಸಿನ ನೆಮ್ಮದಿಗೆ ದೇವಸ್ಥಾನಕ್ಕೆ ಬರ್‍ತಾರೆ ಅನ್ನೋದನ್ನ ಕೇಳಿದ್ದೇನೆ. ಅವರಿಗೆ ದೇವಾಲಯ ಮುಕ್ತವಾಗ ಬೇಕು. ದೇವಾಲಯ ಎಲ್ಲರಿಗೂ ಸೇರಿದ್ದು. ಆದರೆ ಯಾರದೇ ಯಜಮಾನಿಕೆ ಇರಕೂಡದು.

ಕನಕ : ಅದೆಲ್ಲ ಹಳೆಯ ಮಾತು. ಅದು ಈಗ ಬೇಕಿಲ್ಲ. ದೇವಾಲಯವನ್ನು ಈಗ ಕಟ್ಟಬೇಕಾಗಿಲ್ಲ. ದಿನಾ ದೇವಸ್ಥಾನಗಳನ್ನು ಕಟ್ಟುತ್ತ ಹೋದರೆ ಅದಕ್ಕೆ ಕೊನೆ ಎಲ್ಲಿ ? ಅದರಿಂದ ಯಾವ ಪ್ರಯೋಜನವೂ ಇಲ್ಲ. ಧರ್ಮಜಾತಿಕುಲಗಳನ್ನು ಮೀರಿದ್ದು ದೇವಸ್ಥಾನ. ದೇವಸ್ಥಾನದ ಮೇಲೆ ಯಾರ ಅಧಿಕಾರವೂ ಇರಕೂಡದು.

ಕನಕ : ಇದು ನಗುತರಿಸೋ ಮಾತು. ಅವನಿಂದಲೇ ಎಲ್ಲವನ್ನು ಪಡೆಯೋ ಜನ ನಾವು. ಅವನಿಗೆ ಅನ್ನ ನೀರು ಕಾಣಿಸೋಕೆ ನಾವು ಯಾರು ?

ಕನಕ : ಹೀಗೆ ಮಿರಿ ಮೀರಿ ಮಾತನಾಡಬಾರದು. ಮನುಷ್ಯರ ಜೊತೆ ಮನುಷ್ಯರಾಗಿ ನಡೆದುಕೊಳ್ಳಿ.

ಕನಕ : ವೃಥಾ ಹಗರಣ ಬೇಡ. ಇವರು ದೇವಸ್ಥಾನದ ಒಳಗೆ ಹೋಗಬೇಕು ಅಂತಿದಾರೆ. ಇವರು ದೇವಸ್ಥಾನ ಪ್ರವೇಶಿಸಿದ ಮಾತ್ರಕ್ಕೆ ಸಮಸ್ಯೆ ಪರಿಹಾರ ಆಗುತ್ತೆ ಎಂದು ನಾನು ನಂಬಿದವನಲ್ಲ. ದೇದಸ್ಥಾನ ಪ್ರವೇಶಿಸುವುದರಿಂದ ಇವರಿಗೆ ಸ್ಥೈರ್ಯ ಬರುತ್ತೆ. ನಾವೆಲ್ಲ ಒಂದು ಅನ್ನುವ ಭಾವನೆ ಬರುತ್ತೆ.

ಕನಕ : ವಿಜಯನಗರದ ಪತನಕ್ಕೆ ಇಂಥ ಕ್ಷುಲ್ಲಕ ಕಚ್ಚಾಟಗಳೇ ಮೂಲಕಾರಣ.

ಕುಲಕುಲಗಳ ನಡುವಣ ಬೆಂಕಿ ಆರುವ ತನಕ ಒಗ್ಗಟ್ಟು ಕನಸಿನ ಗಂಟು. ಒಂದಾಗದೆ ಇರುವ ತನಕ ರಾಜಕೀಯ ಮಾಡುವವರಿಗೆ ಅದರಿಂದ ಲಾಭ. ಇದರಿಂದ ಮನುಷ್ಯ ಲೋಕಕ್ಕೆ ಕ್ಷೇಮ ಇಲ್ಲ.

[ಪಂಡಿತರು ಮತ್ತು ಕನಕನ ನಡುವೆ ಘರ್ಷಣೆ ತೀವ್ರವಾಗುತ್ತದೆ. ಕನಕ ತನ್ನ ಸಂಗಡಿಗರನ್ನು ತಡೆಯಲು ಪ್ರಯತ್ನಿಸುತ್ತಾನೆ]

ಕನಕ : ನೋಡಿ... ನಿಮಗೊಂದು ಪ್ರಶ್ನೆ. ಕುಲ ಕುಲ ಎಂದು ಉಬ್ಬಿ ಕೂಗುವ ನಿಮಗೆ ಕುಲದ ನೆಲೆ ಏನು ಅನ್ನುವುದು ಗೊತ್ತೊ ? ಕುಲವನ್ನೇ ದೊಡ್ಡದು ಮಾಡಿಕೊಂಡು ಹೋರಾಡಿದರೆ ಬಂದ ಫಲವೇನು ? ಕುಲ ಕುಲ ಕುಲವೆಂದು ಹೊಡೆದಾಡದಿರಿ ನಿಮ್ಮ

ಕುಲದ ನೆಲೆಯೇನಾದರೂ ಬಲ್ಲಿರಾ ?
ಆತ್ಮ ಯಾವ ಕುಲ ಜೀವ ಯಾವ ಕುಲ ?
ತತ್ತ್ವೇಂದ್ರಿಯಗಳ ಕುಲವ ಪೇಳಿರಯ್ಯ
ಆತ್ಮಾಂತರಾತ್ಮ ಕಾಗಿನೆಲೆಯಾದಿಕೇಶವರಾಯನೊಲಿದ
ಭಕ್ತರಿಗೆ ಕುಲವಾವುದು ಹೇಳಿರಯ್ಯಾ.

[ಪಂಡಿತರು ಕುಪಿತರಾಗುತ್ತಾರೆ]

ಕನಕ : ಹೀಗೆ ನೀವು ಹೋರಾಡಿದರೆ ಹಿಂಸೆಗೆ ದಾರಿ ಆಗುತ್ತೆ. ಹಿಂಸೆಯಿಂದ ಯಾರಿಗೂ ಕ್ಷೇಮ ಇಲ್ಲ. ಸಮಸ್ಯೆ ಪರಿಹಾರ ಆಗೋಲ್ಲ. ನಮ್ಮದು ನಿಜವಾದ ಆಗ್ರಹ. ಇವರು ದೇವಸ್ಥಾನದ ಒಳಗೆ ಹೋಗಬೇಕು. ಇವರಿಗೆ ಪ್ರವೇಶ ಇಲ್ಲ ಅನ್ನುವುದಾದರೆ ನೀವೂ ದೇವಸ್ಥಾನದ ಒಳಗೆ ಹೋಗಬಾರದು... ಇವರಿಗೆ ಪ್ರವೇಶ ದೊರೆಯುವ ತನಕ ನಾನು ಸತ್ಯಾಗ್ರಹ ಮಾಡ್ತೇನೆ.

ಕನಕ : ಇವರು ನಮ್ಮೆಲ್ಲರ ಸಹನೆಗೆ ಸವಾಲು ಹಾಕಿದ್ದಾರೆ. ನೀವೆಲ್ಲ ಒಟ್ಟಾಗಿ ದೇವಸ್ಥಾನದ ಒಳಕ್ಕೆ ಹೋಗಿ.

[ಕನಕನ ಸಂಗಡಿಗರು ದೇವಾಲಯವನ್ನು ಪ್ರವೇಶಿಸುತ್ತಾರೆ. ಗೊಂದಲದ ವಾತಾವರಣ ಏರ್ಪಡುತ್ತದೆ]

ಕನಕ : ನಿಮಗೆ ದೇವಸ್ಥಾನದ ಪ್ರವೇಶ ಬೇಕಿತ್ತು. ಆಯಿತಲ್ಲ ? ಇನ್ನೇನು ಬೇಕು ? ನಾನು ಹೊರಡುತ್ತೇನೆ.

ಕನಕ : ನನ್ನನ್ನು ನನ್ನ ಪಾಡಿಗೆ ಬಿಟ್ಟುಬಿಡಿ.
[ಮೌನ ಆವರಿಸುತ್ತದೆ]

ಕನಕ : ದೇವಾಲಯದಲ್ಲಿ ಕೇಶವ ಇದಾನೆ ಎಂದು ತಿಳಿದಿರುವವರು ಒಂದು ಕಡೆ. ದೇವಾಲಯದ ಮೇಲೆ ಹಿಡಿತ ಸ್ಥಾಪಿಸಿ ಕೊಂಡಿರುವವರು ಇನ್ನೊಂದು ಕಡೆ. ಇವರ ಮಧ್ಯೆ ನಾನು ತಾನೆ ಯಾಕೆ ನಿಂತೆ? ಇದನ್ನು ಬುದ್ಧಿ ತರ್ಕಗಳಿಂದ ನಿರ್ಧಾರ ಮಾಡುವುದಕ್ಕೆ ಹೋದಷ್ಟು ಸಮಸ್ಯೆ ಜಟಿಲ ಆಗುತ್ತೆ. ದೂರ... ಹೋಗುತ್ತೆ. ಮನಸ್ಸು, ಬುದ್ಧಿ, ನಾಲಗೆ, ವಾಸನೆ ಇವುಗಳೆಲ್ಲದರ ಹಿಂದೆ ಒಂದು ನಿಗೂಢ ಇದೆ. ಈ ರಹಸ್ಯವೆ ಕೇಶವನ ಮಾಯೆ ಇರಬಹುದು ? ಏನೊಂದೂ ತಿಳಿಯುತ್ತಿಲ್ಲ.

ನೀ ಮಾಯೆಯೊಳಗೊ ನಿನ್ನೊಳು ಮಾಯೆಯೋ
ಬಯಲು ಆಲಯದೊಳಗೊ ಆಲಯದೊಳಗೆ: ಬಯಲೊ
ಬಯಲು ಆಲಯವೆರಡು ನಯನದೊಳಗೊ
ನಯನ ಬುದ್ಧಿಯ ಒಳಗೊ ಬುದ್ಧಿ ನಯನದೊಳಗೊ
ನಯನ ಬುದ್ಧಿಗಳೆರಡಿ ನಿನ್ನೊಳಗೊ ಹರಿಯೆ
ಸವಿಯು ಸಕ್ಕರೆಯೊಳಗೊ ಸಕ್ಕರೆಯು ಸವಿಯೊಳಗೊ
ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೊ
ಜಿಹ್ವೆ ಬುದ್ಧಿಯ ಒಳಗೊ ಬುದ್ಧಿ ಜಿಹ್ವೆಯ ಒಳಗೊ
ಬುದ್ಧಿ ಜಿಹ್ವೆಗಳೆರಡು ನಿನ್ನೊಳಗೊ ಹರಿಯೆ
ಕುಸುಮದೊಳು ಗಂಧವೊ ಗಂಧದೊಳು ಕುಸುಮವೊ
ಕುಸುಮ ಗಂಧಗಳೆರಡು ಘ್ರಾಣದೊಳಗೊ
ಅಸಮಭವ ಕಾಗಿನೆಲೆಯಾದಿ ಕೇಶವರಾಯ
ಉಸುರೆನ್ನಳವಲ್ಲ ಎಲ್ಲ ನಿನ್ನೊಳಗೊ.

[ಹಾಡುತ್ತಾ ಹಾಡುತ್ತಾ ಕನಕ ಕುಸಿಯುತ್ತಾನೆ. ರಂಗದಲ್ಲಿ ಮಸುಕು ಬೆಳಕು ತುಂಬುತ್ತದೆ. ಆದಿಕೇಶವ ಸ್ವಾಮಿ ತನ್ನ ಗೆಳತಿಯರೊಂದಿಗೆ ಕುಣಿಯುತ್ತ ರಂಗವನ್ನು ಪ್ರವೇಶಿಸುತ್ತಾನೆ. ತನ್ನ ಕೊಳಲಿನಿಂದ ಕನಕನನ್ನು ಎಚ್ಚರಿಸುತ್ತಾನೆ. ಕೇಶವನನ್ನು ಕನಕ ಹಿಡಿದುಕೊಳ್ಳಲು ಹೋಗುತ್ತಾನೆ. ಕೇಶವ ಕನಕನಿಗೆ ಸಿಗುವುದಿಲ್ಲ. ಅವನನ್ನು ಬೆನ್ನಟ್ಟಿ ಹೋದಂತೆಲ್ಲಾ ಅವನು ದೂರವಾಗುತ್ತಾನೆ. ಕುಣಿತ ತೀವ್ರಗೊಳ್ಳುತ್ತದೆ. ಕನಕ ಒಂದು ಭ್ರಾಮಕ ಸ್ಥಿತಿಗೆ ಸಲ್ಲುತ್ತಾನೆ.]

ಕನಕ : ಅವು ನನ್ನ ಕೃತಿಗಳಲ್ಲ. ಕನ್ನಡದ ಕೃತಿಗಳು. ಕೇಶವ ನನ್ನ ಅಂತರಂಗದಲ್ಲಿ ಕುಳಿತು ನುಡಿಸಿದ ನುಡಿಗಳು.

ಕನಕ : ಮನುಷ್ಯ ಪ್ರಪಂಚ ಹಣದ ದಾಸ್ಯದಿಂದ, ಮತ – ಮತೀಯ ದಾಸ್ಯದಿಂದ ಬಿಡುಗಡೆ ಪಡೆಯಬೇಕು. ದಾಸರ ಚಿಂತನೆಯಿಂದ ದಾಸ್ಯ ಕೊನೆಗೊಳ್ಳಬೇಕು.

ಕನಕ : ಕೇಶವ ನನ್ನನ್ನು ಅಧಿಕಾರದಿಂದ ಮುಕ್ತ ಮಾಡಿದ. ಪರಬಲವನ್ನು ನೋಡಿದರೆ ಉರಿದು ಬೀಳುತ್ತಿದ್ದ ನನ್ನ ಮದವನ್ನು ಮುರಿದ, ನನ್ನನ್ನು ತನ್ನ ಕಡೆಗೆ ಸೆಳೆದುಕೊಂಡ

ಕನಕ : ನಿಮ್ಮ ಮಾತುಗಳು ನನ್ನ ಅಂತಃಕರಣವನ್ನು ತುಂಬಿವೆ.

ಕನಕ : ಮಾಯೆ ಎಲ್ಲರ ಹಿಂದೆ ನೆರಳಾಗಿ ಕಾಡುತ್ತದೆ. ಭಕ್ತಿಯ ಎದುರಿಗೆ ಮಾಯೆ ನಿಲ್ಲುವುದಿಲ್ಲ. ಮಾಯೆಯನ್ನು ಕಳೆದುಕೊಳ್ಳೋದರಿಂದ ಮಾತ್ರ ಮುಕ್ತರಾಗೋದಕ್ಕೆ ಸಾಧ್ಯ.

ಕನಕ : ಅಲ್ಪ, ಸ್ವಾತಂತ್ರ್ಯ.

ಕನಕ : ಮಾಯೆ ಒಂದು ದೀಪ. ಅದಕ್ಕೆ ಭ್ರಮಿಸುವವರು ಪತಂಗಗಳು.

ಕನಕ : ಸತ್ಯವನ್ನು ಹೇಳಿದಾಗಲೂ ಅದಕ್ಕೆ ವಿಮುಖರಾಗುವವರು ಇರುತ್ತಾರೆ. ಆದರೆ ಸತ್ಯ ಹೇಳುವುದು ದೊಡ್ಡದು. ಸತ್ಯವನ್ನು ಹೇಳಿದವನಿಗಾದರು ತಾನು ಸತ್ಯವನ್ನು ಹೇಳಿದ್ದೇನೆ ಅನ್ನುವುದು ತಿಳಿದಿರುತ್ತೆ. ಅದನ್ನೇ ನಾನು ಕೇಶವನ ಧ್ವನಿ ಎಂದು ನಂಬಿರುವವನು.

[ರಂಗದ ಮೇಲೆ ಬೆಳಕು ಕಡಿಮೆಯಾಗುತ್ತಾ ಹೋಗುತ್ತದೆ]

ಕನಕ : ವೇದ ಶಾಸ್ತ್ರಗಳನ್ನು ಓದಿ ಅವರಿಗೆ ಬಾಯಾರಿಕೆ ಆಗಿದೆ. ಅವರೀಗ ದಾಸತತ್ತ್ವಕ್ಕೆ ಮಸಿ ಬಳಿಯುತ್ತಿದ್ದಾರೆ.

ಕನಕ : ಪಂಡಿತರೊಂದಿಗೆ ಅತಿ ವಾದ ಕೂಡದು.

ಕನಕ : ಇವರು ದೇವರನ್ನು ತೊಳೆಯುತ್ತಾರೆ. ತಮ್ಮ ಮನಸ್ಸನ್ನು ತೊಳೆದು ಕೊಳ್ಳಲು ಸಾಧ್ಯವಾಗಲಿಲ್ಲ.

ಕನಕ : ಜಿಜ್ಞಾಸೆ ಮಾಡೋದಾದರೂ ಏನನ್ನು ಅನ್ನೋ ಜಿಜ್ಞಾಸೆ ನನ್ನದು. ಯವ ಜಿಜ್ಞಾಸೆಯಾದರೂ ಸರಿಯೆ.

ಕನಕ : ಜಗತ್ತಿನಲ್ಲಿ ಕಲ್ಲೂ ಇದೆ : ರತ್ನವೂ ಇದೆ. ಆದರೆ ದಾಸರಿಗೆ ಸಮನಾದ ಶಕ್ತಿ ಬೇರೆ ಯಾವುದೂ ಇಲ್ಲ. ಯಾರು ಯಾರನ್ನೂ ಪರೀಕ್ಷೆ ಮಾಡುವುದು ಅಗತ್ಯವಿಲ್ಲ. ನಮ್ಮನ್ನು ಒರೆ ಹಚ್ಚುವವನು ಆ ಕೇಶವ ಮಾತ್ರ.

ಕನಕ : ಎಲ್ಲಿ ಹೋದರೂ ಒಬ್ಬನಿದ್ದನು. ಲೋಕದಲ್ಲೆಲ್ಲಾ ವ್ಯಾಪಿಸಿಕೊಂಡಿರುವ ಆ ಒಬ್ಬ ಇದ್ದ, ಕೇಶವ... ಅವನನ್ನು ತಿನ್ನುಅಂದೆ, ಅವನ ಹೊರತಾಗಿ ಬೇರೆ ಯರೂ ಕಾಣಲಿಲ್ಲ. ನನಗೆ ಅವನ ಎದುರಿಗೆ ತಿನ್ನಬೇಕು ಅನ್ನಿಸಲೇ ಇಲ್ಲ. ಸಮುದ್ರದಲ್ಲಿ ಸೇರಿಕೊಂಡ ಹನಿಯ ಹಾಗೆ. ಅದನ್ನು ಹುಡುಕುವುದು ಹೇಗೆ ?

ಕನಕ : ಯಾರೂ ಇಲ್ಲದ ಸ್ಥಳ ಹುಡುಕಿದ್ದರೆ ಸಿಕ್ಕುತ್ತಿತ್ತೋ ಏನೊ ? ತಿಳಿಯದು. ಆದರೆ ನಾನು ದಂಡೆಯ ಮೇಲೆ ನಿಂತು ಬಿಟ್ಟೆ.

ಕನಕ : ನನಗೆ ಗುಪ್ತವಗಿರುವುದರಲ್ಲಿ ನಂಬಿಕೆಯಿಲ್ಲ. ವ್ಯಕ್ತವಾಗಿರುವುದನ್ನು ತಿಳಿಯೋನು.

ಕನಕ : ಅದು ಏನೇ ಇರಲಿ. ಅದು ನನ್ನ ಕೇಶವ. ನನ್ನ ಜೀವದಮೂರ್ತಿ. ನನ್ನ ಚೇತನ.... ಕೇಶವ.

[ವ್ಯಾಸರಾಯ ಕೈ ತೆರೆಯುವನು. ಕೇಶವನ ಮೂರ್ತಿ ಗೋಚರವಾಗುತ್ತದೆ. ಶಿಷ್ಯರು ತಲೆ ತಗ್ಗಿಸುವರು]

ಕನಕ : ಕೇಶವ ಬಯಲಿನ ಆಲಯದಲ್ಲಿದ್ದಾನೆ ಅಂತ ಬರೆದೆ. ಹಾಡಿದೆ, ಬಯಲನ್ನೇ ಆಲಯವನ್ನು ಮಾಡಿಕೊಂಡ... ಕೇಶವ, ಆಲಯವನ್ನು ಬಿಟ್ಟು ಬಾ.

ಕನಕ : ಬಂಧನದಲ್ಲಿರುವ ಕೇಶವನನ್ನು ಮುಕ್ತಗೊಳಿಸುವ ತನಕ ನನಗೆ ನೆಮ್ಮದಿಯಿಲ್ಲ. ಕೇಶವ... ಕೇಶವ... ನಾನು ಕೂಗೋ ಕೂಗು ಕೇಳಿಸುತ್ತಾ ಇದೇ ತಾನೆ ? ಆ ಕತ್ತಲಿನಲ್ಲಿ ಕೂತು ನೀನು ಸಾಧಿಸೋದಾದರೂ ಏನು ?

ಕನಕ : ಕೇಶವ... ಇವರೆಲ್ಲರ ಕಚ್ಚಾಟ ನಿಲ್ಲಿಸೋಕೆ ನಿನಗೆ ಸಾಧ್ಯವಿಲ್ಲವೇನು ? ನೀನು ಬಂದು ಮುಖ ತೋರಿಸು. ವಾದ ವಿವದಗಳಿಗೆ ಮುಕ್ತಾಯ ತರುವುದಕ್ಕೆ ನಿನ್ನಿಂದ ಮಾತ್ರ ಸಾದ್ಯ.

ಕನಕ : ಇಲ್ಲ. ನಾನು ತೊಲಗುವುದಕ್ಕೆ ಬಂದಿಲ್ಲ. ಕೇಶವನನ್ನು ಪೂಜಿಸೋಕೆ, ಪ್ರಾರ್ಥಿಸೋಕೆ ಬಂದಿಲ್ಲ. ಅವನನ್ನು ಜನರ ಮಧ್ಯೆ ಓಡಾಡಿಸಬೇಕು. ಕೇಶವನ ಅಂತರಂಗವನ್ನು ಜನರ ಅಂತರಂಗದ ಜೊತೆ ಸೇರಿಸಬೇಕು. ಇದು ನನ್ನ ಆಸೆ. ದೇವರು ಅನ್ನೋದು ಒಂದು ಕಲ್ಪನೆ. ಆ ಕಲ್ಪನೆಯಲ್ಲಿರುವ ಮನುಷ್ಯತ್ವ ದೊಡ್ಡದು... ಅವನೇ ನನ್ನ ಕೇಶವ.

ಕನಕ : (ಯಾರ ಮಾತುಗಳನ್ನು ಲೆಕ್ಕಿಸದೆ) ಕೇಶವ... ಈ ಎಲ್ಲ ಗೊಂದಲಗಳನ್ನು ಮೀರಿ ಹೋಗೋಣ ಬಾ. ಈ ಜಂಜಾಟ, ಗೊಡವೆ ಎಲ್ಲ ಯಾಕೆ ? (ಮುನ್ನುಗ್ಗುವನು).

ಕನಕ : ಕೇಶವ.... ಬಂದೆಯಾ? ಹೋಗೋಣ ಬಾ.

[ಕೇಶವ ಪ್ರೀತಿಯಿಂದ ಕನಕ ಪುರಂದರರ ಹೆಗಲಿನ ಮೇಲೆ ಕೈ ಇಡುತ್ತಾನೆ]

ಕನಕ : ಮುಟ್ಟದಿರು... ನನ್ನನ್ನು ಮುಟ್ಟದಿರು.

ಕನಕ : ನಾನು ಆಲಯದ ಕೇಶವನನ್ನು ನೋಡೋಕೆ ಬಂದಿಲ್ಲ. ಅವನನ್ನು ಬಯಲಿನಲ್ಲಿ ಬಯಲು ಮಾಡಲು ಬಂದಿದ್ದೇನೆ. ಆಲಯದ ಕಗ್ಗತ್ತಲಿನಲ್ಲಿ ಸೊರಗುವ ಕೇಶವನೂ ಬೇಡ; ಕೃಷ್ಣನೂ ಬೇಡ, ಬೆಳಕಿನ ಕಡೆಗೆ ಹೋಗುವವರು ನಾವು. ಇಚ್ಛೆ ಇದ್ದರೆ ನೀನೂ ಬಾ.

ಕನಕ : ನಾನು ನಿನ್ನೊಳಗೂ ಇಲ್ಲ. ನೀನು ನನ್ನೊಳಗೂ ಇಲ್ಲ.... [ಪುರಂದರ ಕೇಶವನ ಕೈಗೆ ತಾಳವನ್ನು ಕೊಡುತ್ತಾನೆ. ಕನಕ ತನ್ನ ಬುವನಾಸಿಯನ್ನು ತೂಗು ಹಾಕುತ್ತಾನೆ. ಕನಕ ಪುರಂದರ ಜೊತೆ ಜನ ಸಮೂಹದಲ್ಲಿ ಸೇರುತ್ತಾನೆ.]

**ಕಾಲ ಮತ್ತು ಚಳುವಳಿಯ ಪ್ರಸ್ತುತತೆ**

ಎಲ್ಲಾ ಕವಿಗಳನ್ನು ಕಾಲದಿಂದ ಹೊರಗಿಟ್ಟೇ ನೋಡಬೇಕು. ಪಂಪಯುಗದಿಂದ ಹೊರತೆಗೆದರೇ ಮಾತ್ರವೇ ಪಂಪ ಗೊತ್ತಾಗೋದು. ಹನ್ನೆರಡನೆಯ ಶತಮಾನದಿಂದ ಹೊರಗಿಟ್ಟಾಗಲೇ ಬಸವಣ್ಣ ಗೋಚರಿಸೋದು. ಸಾಹಿತ್ಯದಲ್ಲಿ ನವ್ಯ, ನವೋದಯ, ನವ್ಯೋತ್ತರ ಅಂತೆಲ್ಲಾ ಇಲ್ಲಿ ಇವತ್ತು ಪ್ರಪಂಚದಾದ್ಯಂತ ಅಂಥವು ಹೊರಟುಹೋಗಿದೆ. ಸಾಹಿತ್ಯ ಚಳುವಳಿಗಳು ಇವತ್ತು ಕಾರ್ಯರೂಪಿಗಳು ಅಲ್ಲವೇ ಅಲ್ಲ. ಉಳಿದ ಸಾಮಾಜಿಕ ಚಳುವಳಿಗಳಾದ ದಲಿತ ಚಳುವಳಿ, ಮಹಿಳಾ ಚಳುವಳಿಗಳು ಕಾರ್ಯರೂಪಿಗಳು. ಅವು ಒಂದು ರಾಜಕೀಯವಾದ, ನಮ್ಮ ನೆಲದ ಮುಖ್ಯವಾದ ಪ್ರಶ್ನೆ ಹೊತ್ತು ಜೊತೆಗೆ ಒಂದು ಸಮಾನತೆಯ ಕುರಿತ ಬೇರೆ ರೀತಿಯ ಹೋರಾಟ ಅದು. ಅದರ ಭಾಗವಾಗಿ ಸಾಹಿತ್ಯ ಬರುತ್ತೆ.

ಆದರೆ ಬಂಡಾಯ ಚಳುವಳಿ ಹಾಗಲ್ಲ. ಅದಕ್ಕೆ ಮೊದಲಿಗೆ ಮಾರ್ಕ್ಸ್‌ವಾದದ ಭಿತ್ತಿ ಇತ್ತು. ಈಗ ಅವಿಲ್ಲ, ಮಾರ್ಕ್ಸ್‌ವಾದ ಮಾವೋವಾದ ನಕ್ಸಲೈಟರು ಯಾರೂ ಇಲ್ಲ. ಯಾವುದೇ ರೀತಿಯ ತಾತ್ವಿಕತೆ ಇವತ್ತು ಬಂಡಾಯ ಚಳುವಳಿಕೆ ಇಲ್ಲ. ಇವತ್ತು ಸಾಹಿತ್ಯ ಚಳುವಳಿಗಳೇ ಅಪ್ರಸ್ತುತ. ಎಪ್ಪತ್ತರ ದಶಕದಲ್ಲಿ ಲೋಹಿಯಾವಾದ, ಮಾರ್ಕ್ಸ್‌ವಾದ ಅವು ಎಲ್ಲಾ ಸ್ವಲ್ಪ ಇದ್ದವು. ಜೊತೆಗೆ ಕಾಂಗ್ರೆಸ್ ವಿರೋಧಿ ಅಲೆ, ಜೆ.ಪಿ.ಚಳುವಳಿ ಮುಂತಾದವು ಜೀವಂತವಾಗಿದ್ದವು. ಬರಬರುತ್ತಾ ಎಲ್ಲವೂ ಕರಗಿಹೋಯ್ತು. ಎಲ್ಲವನ್ನು ಇವತ್ತು ಟೆಕ್ಸ್ಟ್ ಅಂಡ್ ಕಾಂಟೆಕ್ಸ್ಟ್ ಆಗಿ ನೋಡಕೆ ಬರೋಲ್ಲ. ಹಾಗೆ ನೋಡ ಹೊರಟರೆ ಇವತ್ತು ತಮಾಷೆಯಾಗಿ ಕಾಣುತ್ತೆ.

# ಸಮಾರೋಪ

ಶ್ರೇಷ್ಠ ಸಂಸ್ಕೃತಿ ಚಿಂತಕರಾಗಿದ್ದ ಕಿ.ರಂ. ಅವರು ಸೃಜನಶೀಲ ಕೃತಿಗಳಾಗಿ "ಕಾಲಜ್ಞಾನಿ ಕನಕ" ಮತ್ತು "ನೀಗಿಕೊಂಡ ಸಂಸ" ಎಂಬ ಎರಡು ನಾಟಕಗಳನ್ನು ವಿವರವಾಗಿ ಪರಿಶೀಲಿಸಿದೆವು. ಕಿ.ರಂ. ಅವರು ಮೊದಲು ಬರೆದದ್ದು, "ನೀಗಿಕೊಂಡ ಸಂಸ" (೧೯೮೬) ನಂತರ "ಕಾಲಜ್ಞಾನಿ ಕನಕ" (೧೯೮೮). ಕನಕ ೧೬ ನೇ ಶತಮಾನದಲ್ಲಿ ಬದುಕಿದ್ದ ಸಂತಕವಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕುಮಾರವ್ಯಾಸನ ನಂತರ ಕಾವ್ಯ ಪರಂಪರೆಯನ್ನು ಮುಂದುವರೆಸಿದ ಕವಿಗಳಲ್ಲಿ ಕನಕನು ಒಬ್ಬನಾಗಿದ್ದಾನೆ. ಹರಿದಾಸ ಪಂಥದಲ್ಲಿ ಕಾಣಿಸಿಕೊಂಡರು ಕೇವಲ ಕೀರ್ತನೆಗಳನ್ನು ಮಾತ್ರ ರಚಿಸಿದೆ ಮೋಹನ ತರಂಗಿಣಿ, ರಾಮದ್ಯಾನಚರಿತೆ, ನಳಚರಿತ್ರೆ, ಹರಿಭಕ್ತಿಸಾರ ಎಂಬ ಕಾವ್ಯಗಳನ್ನು ರಚಿಸಿದ್ದಾನೆ. ಸಂಸ ಆಧುನಿಕ ಕಾಲದವನು ಮೈಸೂರು ಅರಸರ ಕಾಲದಲ್ಲಿ ಜೀವಿಸಿದ್ದ ಈಗತ ಅವರ ಚರಿತ್ರೆಯನ್ನು ಬಳಸಿಕೊಂಡು ಬದುಕಿನ ಮೂಲಭೂತ ಪ್ರಶ್ನೆಗಳನ್ನು ಎತ್ತಿದ್ದಾನೆ.

ಕನಕ ಮತ್ತು ಸಂಸ ಇಬ್ಬರು ರಾಜಶಾಹಿಯ ಕಾಲದಲ್ಲಿ ಬದಕಿದವರು ಪ್ರಭುತ್ವದ ಒಳ-ಹೊರಗುಗಳನು ತೀರ ಹತ್ತಿರದಿಂದ ಬಲ್ಲವರು. ಅದರಲ್ಲೂ ಕನಕ ತಾನೆ ಸ್ವಲ್ಪಕಾಲ ದಂಡನಾಯಕ ನಾಗಿದ್ದವನು ಅರಮೆಯ ಗುಪ್ತಜೀವನವನ್ನು ತಮ್ಮ ಕೃತಿಗಳಲ್ಲಿ ಅನಾವರಣಗೊಳಿಸಿದವರು. ತಮ್ಮ ಕಾಲದಲ್ಲಿ ಮೌಢ್ಯತೆಯಿಂದ ಮರೆಯುತ್ತಿದ್ದ ಪಂಡಿತ ವರ್ಗವನ್ನು ಎದುರುಹಾಕಿಕೊಂಡವರು. ಆದ್ದರಿಂದಲೇ ಈ ಹಿಂದಿನ ಅಧ್ಯಾಯದಲ್ಲಿ ಕಿ.ರಂ. ರವರು ವೈಯಕ್ತಿಕ ಬದುಕಿನಲ್ಲಿಕನಕ ಮತ್ತು ಸಂಸರಿಬ್ಬರೂ ಇದ್ದಾರೆ ಎನಿಸುತ್ತದೆ. ಎಂಬ ಅಭಿಪ್ರಾಯಕ್ಕೆ ಬರಲಾಗಿದೆ. ಕಿ.ರಂ. ರವರು ಕನಕದಾಸರ ಕಾವ್ಯ ಹಾಗೂ ಸಂಸರ ನಾಟಕಗಳನ್ನು ಆದರಿಸಿ ಈ ಎರಡು ನಾಟಕಿಗಳ್ನನು ರಚಿಸಿದ್ದರೂ, ಇವು ಸ್ವತಂತ್ರ ನಾಟಕಗಳೇ ಎಂಬಂತೆ ರಚಿತಗೊಂಡಿರುವುದೇ ಗಮನಾರ್ಹ ಸಾಹಿತ್ಯದ ಸಂದರ್ಭದಲ್ಲಿ ಕೇವಲ ಒಬ್ಬ ಮಾತುಗಾರರಾಗಿರಿಲ್ಲ ಅವರು ಸಾಹಿತ್ಯದ ಸಂಸ್ಕೃತಿ ಪ್ರಸರಣದ ಒಬ್ಬ ಂಥಿಣುತ್ತುಣ ಇಂತಹ ಕಾರ್ಯ ಶೀಲನೆ ಅವರ ಪ್ರವೃತ್ತಿ ಮಾತ್ರವಲ್ಲದೆ ಬಲವಾದ ಸಂಬುಗೆಯು ಆಗಿತ್ತು. ಕಿ.ರಂ. ರವರು "ಕಾಲಜ್ಞಾನಿ ಕನಕ" ನಾಟಕದಲ್ಲಿ ಯುದ್ಧದಿಂದ ಎಲ್ಲಾ ಸುಟ್ಟು ನಾಶವಾಗುತ್ತಿರುವಾಗ ನಾವು ಮನುಷ್ಯರಾಗುವುದು ಮುಖ್ಯ ಎಂದು ಕನಕ ಹೇಳುವುದು "ಎಲ್ಲಾ ಸುಟ್ಟು ನಾಶವಾಗ್ತಾ ಇರುವಾಗ ನಮ್ಮ ಅಂತರಂಗದಲೊಂದು ಗಿಡನೆಟ್ಟು ಪ್ರೀತಿಯ ಒಂದು ಹೂವು ಅರಳಿಸೋಣ" ಎಂಬುದು.

ಅವರ ನಾಟಕಗಳಲ್ಲಿ ಕಂಡುಬರುವ ಧೋರಣೆಗಳನ್ನು ಗಮನಿಸಿದರೆ ಕಿ.ರಂ. ಅವರಲ್ಲೂ ಪ್ರಜ್ಞಾವಂತ ಸಂಸ್ಕೃತಿ ನಿಷ್ಠೆ ಚಿಂತಕರಿಗೆ ಸಹಜವಾಗಿ ಇರುವ ರೀತಿಯಲ್ಲಿ ರಾಜಕೀಯ ಚಿಂತನೆಗಳು ಇದ್ದವು ಎಂಬುದು. ಇದು ಈ ನಾಟಕದ ವಸ್ತು ವಿಶ್ಲೇಷಣೆಗಳಲ್ಲಿ ಸಹಜವಾಗಿಯೇ ಮೈತಳೆದಿವೆ. ಕನಕ ಹೇಳಿದ ಹಾಗೆಯೇ ಮನುಷ್ಯರ ನಡುವೆ ಪ್ರೀತಿಯ ಹೂವು ಅರಳಬೇಕು ಎಂಬುದೇ ಕಿ.ರಂ ರವರ ಅಶಯವು ಆಗಿದೆ. ಕಿ.ರಂ. ರವರು ಸಮಗ್ರ ವ್ಯಕ್ತಿತ್ವವನ್ನು ರಾಜಕೀಯ ನಿಲುವುಉಗಳ್ನನು ಇಲ್ಲಿ ಅರ್ಥೈಸಿಕೊಳ್ಳಲು ಸಾದ್ಯವಿದೆ.

ಎರಡೂ ನಾಟಕಗಲ್ಲಿ ಕಿ.ರಂ. ರವರ ರಾಜಕೀಯ ವಿಚಾರಧಾರೆಗಳನ್ನು ಅರಿಯಲುಸಾದ್ಯ ಕಿ.ರಂ ರವರಿಗೆ ರಾಜಕೀಯ ಎಂದರೆ ಕೇವಲ ಕಠತಿಜಡಿ ಕಠಟುಣುಖಿ ಅಲ್ಲ ಅದರ ಅರವು ಇನ್ನೊ ದೊಡ್ಡದು ಇದಕ್ಕೆ ಉದಾಹರಣೆ ಎಂದರೆ ಕಿ.ರಂ ಕಾಲಜ್ಞಾನಿ ಕನಕ ನಾಟಕವನ್ನು ರಚಿಸಿದ್ದು ಕೃಷ್ಣದೇವರಾಯ ಪಟ್ಟಕ್ಕೆ ಬಂದು ೫೦೦ವರ್ಷಗಳು ಆದ ಆರಣೆಯ ಸಂದರ್ಭದಲ್ಲಿ ಆದರೆ "ದಿ ಸಂಡೆ ಇಂಡಿಯನ್" ಪತ್ರಿಗೆ ನೀಡಿದ ಸಂದರ್ಶನ ಒಂದರಲ್ಲಿ ಕಿ.ರಂ ರವರು ಸರ್ಕಾರವು ಈ ಸಂಬ್ರಮ ಆಚರಣೆಗೆ ಖರ್ಚುಮಾಡಿದ ಹಣವನ್ನು ಬಳ್ಳಾರಿ ಜಿಲ್ಲೆಯ ಪ್ರಾಥಮಿಕ ಶಾಲೆಯ ಶೌಚಾಲಯ ವ್ಯವಸ್ಥೆಗೆ ಬಳಸಬಹುದಿತ್ತು" ಎಂದಿದ್ದರು. ಇಲ್ಲಿ ಪ್ರಖರ ರಾಜಕೀಯ ತತ್ವವನ್ನು ಕಿ.ರಂ ಪ್ರತಿಪಾದಿಸುತ್ತಿದ್ದಾರೆ. ಎನ್ನಬಹುದು. ರೈತರ ಕಣ್ಣೀರನ್ನು ಕುರಿತು ಮಾತನಾಡುವುದು ಭಾಷೆಯ ಕುರಿತು ಚರ್ಚೆಗಳು ಕೂಡ ರಾಜಕೀಯವೇ ಆಗಿದೆ ಎಂದು ನಂಬಿದ್ದರು. ರಾಜಕೀಯಕ್ಕೆ ನಮ್ಮ ಬದುಕಿನ ಚಿಕ್ಕ–ಪುಟ್ಟ ಸಂಗತಿಗಳನ್ನು ನಿರ್ಧರಿಸುವಸಾಮರ್ಥವಿದೆ. ಆದ್ದರಿಂದ ರಾಜಕೀಯದ ವ್ಯಾಪ್ತಿಯನ್ನು ರಾಜಕೀಯಕ್ಕಿಂತಲೂ ದೊಡ್ಡದಾದ ನೆಲೆಯಲ್ಲಿ ಗುರುತಿಸಬೇಕೆಂಬುದು ಅವರ ಅಭಿಪ್ರಾಯವಾಗಿತ್ತು. ಸಮುದಾಯದ ಹಿತಾಸಕ್ತಿಗೆ ಹೋರಾಟ ನಡೆಸುವ ಕನಕನಂತರಹ ಸಂತನ ಪಾತ್ರವನ್ನು ನಿರೂಪಿಸುವಾಗ "ಪ್ರಜಾಪ್ರಭುತ್ವದಲ್ಲಿ ಸ್ವರಾಜ್ಯದ ಕನಸನ್ನು ಜೀವಂತವಾಗಿಸುವ ಕ್ರಮವಿದೆ" ಎಂಬ ಅವರ ಧೋರಣೆ ಇಲ್ಲಿ ವ್ಯಕ್ತಗೊಂಡಿರುವುದನ್ನು ಗಮನಿಸಬಹುದು.

**"ಕಾಲಜ್ಞಾನಿಕನಕ"** ಮತ್ತು **"ನೀಗಿಕೊಂಡ ಸಂಸ"** ಎರಡೂ ನಾಟಕಗಳಲ್ಲಿ ಕಿ.ರಂ. ರವರ ಎಡಪಂಥೀಯ ಪರಿಕಲ್ಪನೆಯ ವಿಶಾಲವಾದ ಹರಹಿನಲ್ಲಿ ಪ್ರಕಟಗೊಂಡಿದೆ. ಏಕೆಂದರೆ ಎಡಪಂಥ ಎಂಬುದು ಎಲ್ಲಾ ಕಾಲದಲ್ಲೂ ಇರುವುದು ಸಮಾಜದಲ್ಲಿರುವ ಯಜಮಾನ್ಯ ಚಿಂತನಾದಾಟಿ ಹಾಗೂ ಮನೋಧರ್ಮದ ಅಬ್ಬರಕ್ಕೆ ಅರೆಜೀವಗೊಂಡ ವ್ಯವಸ್ಥೆಯ ದುರ್ಬಲ ವರ್ಗಗಳು ತೋರುವ ಪ್ರತಿರೋಧವೇ ಎಡಪಂಥ. ಎಡಪಂಥ ಎಂದರೆ ಸರ್ವಾಧಿಕಾರಿ ವ್ಯವಸ್ಥೆಯ

ವಿರೋಧವೇ ಆಗಿದೆ. ಉಳ್ಳವರ ದರ್ಪದ ಎದುರು ನಿರ್ಗತಿಕರು ತೋರುವಚಿಕ್ಕ ಎದೆಗಾರಿಕೆ ಕೂಡ ಎಡಪಂಥೀಯವಾಗಬಲ್ಲದು. ಕನಕ ಮತ್ತು ಅನ ಸಂಗಡಿಗರು ದೇವಾಲಯ ಪ್ರವೇಶ ಸಂದರ್ಭದಲ್ಲಿ ಪುರೋಹಿತಶಾಹಿಯ ವಿರುದ್ಧ ತೋರುವ ಪ್ರತಿಭಟನೆ, ಕನಕ ದಂಡನಾಯಕನಾಗಿದ್ದಾಗ ತನ್ನ ಪ್ರಜೆಗಳಿಗೆ ಹೇಳುವ ಪ್ರಭುತ್ವ ಮತ್ತು ಯುದ್ಧ ವಿರೋಧಿ ಮಾತುಗಳಲ್ಲಿಯೂ ಈ ಎಡಪಂಥೀಯ ಧೋರಣೆಯ ನಿಲುವು ಎಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. ಇದೇ ರೀತಿ ತಾತ್ವೀಕತೆಗಿಂತಲೂ ಹೆಚ್ಚು ಅನುಭವ ನಿಷ್ಠರಾಗಿ ಕಿ.ರಂ. ಅವರು ರಾಜಕೀಯ ವಿಚಾರಧಾರೆಯನ್ನು ಪ್ರವೇಶಿಸುತ್ತಾರೆ ಎಂಬುದನ್ನು "ನೀಗಿಕೊಂಡ ಸಂ" ದ ಮೂಲಕ ಸ್ಪಷ್ಟಪಡಿಸಿಕೊಳ್ಳಬಹುದು. ಹೀಗೆ ಅನುಭವಕ್ಕೆ ಸಿದ್ಧಿಸುವುದು ಸತ್ಯವಾಗಿ ಕಾಣಿಸುತ್ತದೆ. ಇಂತಹ ನಿಲುವುಗಳು ಸೃಷ್ಟಿಸುವ ಸಮಸ್ಯೆ ಅನೇಕ ಆದರೆ ಸಾಹಿತ್ಯ ವಿಶ್ಲೇಷಣೆಯಲ್ಲಿ ಅದು ಕಿ.ರಂ. ರವರ ಬಿಚ್ಚುಮನಸ್ಸಿನ ಶಕ್ತಿಯೂ ಆಗಿ ಪ್ರಕಟವಾಗಿರುವುದನ್ನು ಈ ನಾಟಕದಲ್ಲಿ ಅರಿಯಬಹುದು.

ಕಿ.ರಂ. ರವರು" ಕಾಲಜ್ಞಾನಿ ಕನಕ" ದಲ್ಲಿನ ಮಾತೊಂದರಿಂದ ಈ ಚರ್ಚೆಯ ಕೊನೆಯ ಹಂತಕ್ಕೆ ಬರಬಹುದು. ಆ ಮಾತೆಂದರೆ ಕನಕ ವ್ಯಕ್ತಪಡಿಸುವ ಬಯಕೆ ಎಂದರೆ" ಕೇಶವನ ಅಂತರಂಗವನ್ನು ಜನರ ಅಂತರಂಗದ ಜೊತೆ ಸೇರಿಸಬೇಕು" ಎಂಬುದು, ದೇವರು ಎಂಬ ಕಲ್ಪನೆಯಲ್ಲಿರುವ ಮನುಷ್ಯತ್ವ ದೊಡ್ಡದು ಎಂಬ ಕನಕನ ಮಾತು ಕಿ.ರಂ. ರವರ ಅಂತರಂಗದ ಮಾತು ಹೌದು. ಹಿರಿ–ಕಿರಿಯರು, ತಿಳಿದವರು–ದಡ್ಡರು, ಶ್ರೀಮಂತರು ಬಡವರು ಎಂಬ ಯಾವ ವ್ಯತ್ಯಾಸಗಳು ಇಲ್ಲದ ಎಲ್ಲರ ಮನಸ್ಸಿನ ಒಳಗು–ಹೊರಗಿನ ನಡವಳಿಕೆಗಳನ್ನು ಸಮಾನವಾಗಿ ಕಾಣುತ್ತಿದ್ದ ಕಿ.ರಂ. ದೊಡ್ಡಮನುಷ್ಯರು ಆಗಿರುವುದರ ಜೊತೆಗೆ ಪ್ರತಿಭಾವಂತ ನಾಟಕಕಾರರು ಆಗಿದ್ದಾರೆಂಬುದು ಅವರ ನಾಟಕಗಳಿಂದ ವೇದ್ಯವಾಗುವ ಸಂಗತಿಯಾಗಿದೆ.

# ಅನುಬಂಧಗಳು

## ಅನುಬಂಧ – ೧ : ಆಕರ ಗ್ರಂಥಗಳು

**ಕಿ.ರಂ.ನಾಗರಾಜ ಅವರ ಎರಡು ನಾಟಕಗಳು**

೧. **"ನೀಗಿಸಿಕೊಂಡ ಸಂಸ"**

ಪ್ರಕಟನಾ ವರ್ಷ: ೧೯೮೬

ಪ್ರಕಾಶನ: ರಂಗಸಂಪದ ಪ್ರಕಾಶನ, ಬೆಂಗಳೂರು–೯.

ಬೆಲೆ ರೂ: ೧೦/–

೨. **"ಕಾಲಜ್ಞಾನಿ ಕನಕ"**

ಪ್ರಕಟನಾ ವರ್ಷ: ೧೯೮೮

ಪ್ರಕಾಶನ: ರಂಗ ನಿರಂತರ, ಬೆಂಗಳೂರು

ಬೆಲೆ: ರೂ. ೧೨/–

## ಅನುಬಂಧ – ೨ : ಪರಾಮರ್ಶನ ಗ್ರಂಥಗಳು


೧. **ತೆರೆದ ಪತ್ರ**
ಸಂ: ಡಾ॥ ನಟರಾಜ ಹುಳಿಯಾರ್
ಪುಸ್ತಕ ಪ್ರಾಧಿಕಾರ, ಕರ್ನಾಟಕ ಸರ್ಕಾರ
ಬೆಂಗಳೂರು.

೨. **ಕಿ. ರಂ. ನೆನಪಿಗೆ**
ಸಂಚಯ ಕನ್ನಡ ಸಾಹಿತ್ಯ – ಸಂಸ್ಕೃತಿ ಪತ್ರಿಕೆ
ಸಂಪುಟ: ೧೯, ಸಂಚಿಕೆ ೮೮–೮೯
ಬೆಂಗಳೂರು.

೩. **ಪರಿಶೋಧ**
ಡಾ॥ ಸಂತೋಷ ಚೊಕ್ಕಾಡಿ
ಶ್ರೀ ರಾಜೇಂದ್ರ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್
೧೨/೧ ಈವನಿಂಗ್ ಬಜಾರ್ ಹಿಂಭಾಗ
ಶಿವರಾಂ ಪೇಟೆ, ಮೈಸೂರು – ೫೭೦೦೦೧

೪. **ಸಂಸರ ನಾಟಕಗಳು**
ಬಿ.ವಿ. ವೈಕುಂಟರಾಜು
ಪ್ರಕಟನಾ ವರ್ಷ: ೧೯೮೮
ಕರ್ನಾಟಕ ನಾಟಕ ಅಕಾಡೆಮಿ ಬೆಂಗಳೂರು

೫. **"ರಂಗಕೃತಿ"**
ಲೇ. ಪ್ರಸನ್ನ
ಅಕ್ಷರ ಪ್ರಕಾಶನ, ಸಾಗರ ೫೭೭೪೦೧

೬. **"ಕನ್ನಡ ನಾಟಕ ಸಮೀಕ್ಷೆ"**
ಕೆ. ಮರುಳಸಿದ್ದಪ್ಪ
ಪ್ರತಿಭಾ ನಾಟಕ ಪ್ರಕಾಶನ
ಯಶವಂತಪುರ, ಬೆಂಗಳೂರು.

೭. **ನಿಜದ ನಾಡೋಜ**
ಸಂ. ಪ್ರದೀಪ ಮಾಲ್ಗುಡಿ,
ಸಂಸ ಪ್ರಕಾಶನ,
ಬೆಂಗಳೂರು, ೨೦೧೧

೮. **ಶಿಶುಕಂಡ ಕನಸು**
ವಾಸುದೇವ ಮೂರ್ತಿ,
ನುಡಿ ಪುಸ್ತಕ, ಬೆಂಗಳೂರು, ೨೦೧೨

೯. **ಸಂಸ ಕವಿ**
ಕರ್ನಾಟಕ ಸಂಘ,
ಸೆಂಟ್ರಲ್ ಕಾಲೇಜು,
ಬೆಂಗಳೂರು, ೧೯೫೬

೧೦. **ಹುತ್ತವ ಬಡಿದರೆ**
ಡಾ.ಕೆ.ವಿ.ನಾರಾಯಣ,
ಪ್ರತಿಮಾ ನಾಟಕ ಪ್ರಕಾಶನ
ಬೆಂಗಳೂಋು, ೧೯೮೬

೧೧. **ಅಂತ್ಯಂಬರ ಗಂಡ**
ಲಿಂಗದೇವರು ಹಳೆಮನೆ
ಅರ್ಪಿತ ಪ್ರಕಾಶನ,
ಮೈಸೂರು, ೧೯೯೯

೧೨. **ಲಂಕೇಶರ ನಾಟಕಗಳು – ಪೋಲೀಸರಿದ್ದಾರೆ ಎಚ್ಚರಿಕೆ**
ಪತ್ರಿಕೆ ಪ್ರಕಾಶನ,
ಬೆಂಗಳೂರು, ೧೯೯೫

೧೩. **ಶ್ರೀ ಕನಕದಾಸರು**
ಬಸವರಾಜ ನಾಯಕ
ನ್ಯಾಷನಲ್ ಬುಕ್ ಆಫ್ ಇಂಡಿಯಾ, ೨೦೦೬

೧೪. **ಕನ್ನಡ ನಾಟಕ : ಯಜಮಾನ**
ಸಂಕಥನ : ಡಾ.ಟಿ.ವೆಂಕಟೇಶಮೂರ್ತಿ
ಅಧ್ಯಯನ ಮಂಡಲ,
ಬೆಂಗಳೂರು, ೨೦೦೯

೧೫. **ಸಂಸ ಸ್ಮರಣೆ**
ಅ.ನ.ಸುಬ್ರಮಣ್ಯಮ್
ನುಡಿ ಪುಸ್ತಕ,
ಬೆಂಗಳೂರು, ೨೦೦೯

೧೬. **ಸಾಹಿತ್ಯ ಮತ್ತು ಇತಿಹಾಸದ ಸಂಬಂಧಗಳು**
ಡಾ.ಅಶೋಕ ಕುಮಾರ ರಂಜರೆ
ಸಿ.ವಿ.ಜಿ ಪಬ್ಲಿಕೇಷನ್,
ಬೆಂಗಳೂರು, ೨೦೦೨

೧೭. **ದಾಸ ಸಾಹಿತ್ಯ ಸಂಪುಟ**
ಕನ್ನಡ ಪುಸ್ತಕ ಪ್ರಾಧಿಕಾರ,
ಬೆಂಗಳೂರು.

# ಅನುಬಂಧ – ೩

## ಕಿ. ರಂ. ಅವರ ವ್ಯಕ್ತಿ–ಕೃತಿ ವಿವರ

**ಪ್ರೊ. ಕಿ. ರಂ. ನಾಗರಾಜ**

**೧. ಹುಟ್ಟಿದ ದಿನಾಂಕ** : ೦೫–೧೨–೧೯೪೩ [ಕಿತ್ತಾನೆ (ಹಾಸನ ಜಿಲ್ಲೆ)]

**೨. ನಿಧನ** : ಆಗಸ್ಟ ೭, ೨೦೧೦ ಬೆಂಗಳೂರಿನಲ್ಲಿ

**೩. ವಿದ್ಯಾಭ್ಯಾಸ** : ಮೈಸೂರು ವಿಶ್ವವಿದ್ಯಾಲಯದ ಬಿ.ಎ. ಪದವಿ, ಬೆಂಗಳೂರು ವಿಶ್ವವಿದ್ಯಾಲಯದ ಎಂ.ಎ. ಪದವಿ.

**೪. ಅಧ್ಯಯನ ಕ್ಷೇತ್ರ** : ಕನ್ನಡ ಕಾವ್ಯ, ಸಾಹಿತ್ಯ ವಿಮರ್ಶೆ, ಸಂಸ್ಕೃತಿ ಅಧ್ಯಯನ, ಸಾಹಿತ್ಯ ತತ್ವ, ನಾಟಕ ಸಾಹಿತ್ಯ, ನಾಟಕ ಪ್ರಯೋಗ, ಪಠ್ಯಪುಸ್ತಕ ನಿರ್ಮಾಣ, ಸಾಂಸ್ಕೃತಿಕ ಸಂಘಟನೆ, ತಾಳಮದ್ದಲೆ, ಜನಪದ ಕಾವ್ಯಗಳ ಸಂವಹನದ ಸಮಕಾಲೀನ ಪ್ರಶ್ನೆಗಳು, ಪರಿಸರದ ಪ್ರಶ್ನೆಗಳು.

**೫. ಉದ್ಯೋಗ :**

- ಕನ್ನಡ ಪ್ರಾಧ್ಯಾಪಕ (ನಿವೃತ್ತ) ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು, ವಿಶ್ವವಿದ್ಯಾಲಯ.
- ಕನ್ನಡ ಪ್ರಾಧ್ಯಾಪಕರಾಗಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಕಾರ್ಯ ನಿರ್ವಹಣೆ (೧೯೯೩–೧೯೯೪).
- ಬೆಂಗಳೂರಿನ ನ್ಯಾಷನಲ್ ಕಾಲೇಜಿನ ಕನ್ನಡ ಸ್ನಾತಕೋತ್ತರ ವಿಭಾಗದಲ್ಲಿ ಸಂದರ್ಶಕ ಪ್ರಾಧ್ಯಾಪಕ.
- ಬೆಂಗಳೂರಿನ ಜೈನ ವಿಶ್ವವಿದ್ಯಾಲಯದ ಸ್ನಾತಕೋತ್ತರ ವಿಭಾಗದಲ್ಲಿ ಸಂದರ್ಶಕ ಪ್ರಾಧ್ಯಾಪಕ.
- ನಿರ್ದೇಶಕ, ಕಾವ್ಯಮಂಡಲ ಬೆಂಗಳೂರು.

೬. ಬರಹ:

೧. ಪ್ರತಿಷ್ಠಿತ ಶಕ್ತಿ ಮತ್ತು ಕನ್ನಡ ಸಾಹಿತ್ಯ (ಸಾಂಸ್ಕೃತಿಕ ಚಿಂತನೆ).

೨. ವಚನ ಕಮ್ಮಟ (ಸಂಪಾದಿತ).

೩. ಆಪತ್ಕಾಲೀನ ಕನ್ನಡ ಕವಿತೆಗಳು (ಸಂಪಾದಿತ).

೪. ಮಧ್ಯಕಾಲೀನ ಕನ್ನಡ ಕವಿತೆ (ಇತರರೊಂದಿಗೆ ಸಂಪಾದಿತ).

೫. ಸಮಾಜವಾದಿ ಆಚಾರ್ಯ (ಇತರರೊಂದಿಗೆ ಸಂಪಾದಿತ).

೬. ನೀಗಿಕೊಂಡ ಸಂಸ (ನಾಟಕ).

೭. ಕಾಲಜ್ಞಾನಿ ಕನಕ (ನಾಟಕ).

೮. ಭಾಸನ ಮಧ್ಯಮ ವ್ಯಾಯೋಗ (ಕನ್ನಡ ಅನುವಾದ).

ಪಂಪ ಕುಮಾರವ್ಯಾಸ, ಕುವೆಂಪು, ಬೇಂದ್ರೆ, ಕಾರಂತ, ಅಡಿಗ, ಲಂಕೇಶ, ಅನುಭಾವಿ ಕಾವ್ಯ, ಆಧುನಿಕ ಕಾವ್ಯ, ಮತ್ತು ಜಾನಪದ, ಪ್ರಭುತ್ವ ಮತ್ತು ಕನ್ನಡ ಸಾಹಿತ್ಯ, ಗಂಗಾಧರ ಚಿತ್ತಾಲರ ಕಾವ್ಯ, ಕನ್ನಡ ಕಾವ್ಯ ರಚನಾ ತಂತ್ರದ ವಿಶಿಷ್ಟತೆ, ಶಿವಪ್ರಕಾಶರ ಕಾವ್ಯ, ವಚನಕಾರರು, ಹೀಗೆ ಕನ್ನಡ ಸಂಸ್ಕೃತಿಯ ವಿಭಿನ್ನ ನೆಲೆಗಳ ಕುರಿತು ೮೦ ಕ್ಕೂ ಹೆಚ್ಚು ಲೇಖನಗಳು ಪ್ರಕಟ.

೭. **ಸಂದಿರುವ ಪ್ರಶಸ್ತಿಗಳು :**

೧. ಡಾ. ಜಿ. ಎಸ್. ಶಿವರುದ್ರಪ್ಪ ಪ್ರಶಸ್ತಿ (ವಿಮರ್ಶೆಗಾಗಿ)

೨. ಡಾ. ಎಲ್. ಬಸವರಾಜ ಪ್ರಶಸ್ತಿ

೩. ಕರ್ನಾಟಕ ನಾಟಕ ಆಕಾಡೆಮಿ ಫೆಲೋ

೪. ಕೆಂಪೇಗೌಡ ಪ್ರಶಸ್ತಿ, ಬೆಂಗಳೂರು

೫. ಕರ್ನಾಟಕ ಸಾಹಿತ್ಯ ಆಕಾಡೆಮಿ ಗೌರವ ಪ್ರಶಸ್ತಿ. (೨೦೦೮)

೬. ಕನ್ನಡ ಪ್ರಸ್ತಕ ಪ್ರಾಧಿಕಾರ – ಜಿ.ಪಿ. ರಾಜರತ್ನಂ ಸಾಹಿತ್ಯ ಪರಿಚಾರಕ ಪ್ರಶಸ್ತಿ ೨೦೦೮

೮. **ಅಧ್ಯಕ್ಷತೆ** : ಹಾಸನ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ (೨೦೦೭)

## ಅನುಬಂಧ – ೪

## ಕಿ.ರಂ ಅವರ ಕೃತಿಗಳು – ಬಿಡಿ ಬರಹಗಳು

**ಭಾಗ–೧ : ಸೃಜನಶೀಲ ಬರಹಗಳು**

೧. ಕಾಲಜ್ಞಾನಿ ಕನಕ

೨. ನೀಗಿಕೊಂಡ ಸಂಸ

**ಭಾಗ–೨ : ಸಾಹಿತ್ಯ ವಿಮರ್ಶೆ ಮತ್ತು ಸಂಸ್ಕೃತಿ ಚಿಂತನೆ**

೧. ಪ್ರತಿಷ್ಠಿತ ಶಕ್ತಿ ಮತ್ತು ಕನ್ನಡ ಸಾಹಿತ್ಯ

೨. ಕವಿರಾಜಮಾರ್ಗ : ಹೊಸ ಭಾಷೆಯೊಂದರ ನಿರ್ಮಾಣ

೩. ಕನ್ನಡ ಕಾವ್ಯರಚನಾ ಪರಂಪರೆಯ ವಿಶಿಷ್ಟತೆ.

೪. ಕನ್ನಡ ಕಾವ್ಯ ಪರಂಪರೆ ಮತ್ತು ಸಂಸ್ಕೃತ ಕಾವ್ಯಮೀಮಾಂಸೆ : ಸಂಬಂಧ ಮತ್ತು ಸಂಘರ್ಷದ ನೆಲೆಗಳು

೫. ಪಂಪ : ಮಾರ್ಗ, ದೇಸಿ ಮತ್ತು ಚಾರಿತ್ರಿಕ ಪ್ರಜ್ಞೆ

೬. ಬಸವಣ್ಣನ ವಚನಗಳು : ಹೊಸ ಓದಿನ ಅನುಸಂಧಾನಗಳು

೭. ಬೆಡಗು : ಒಂದು ಅನುಸಂಧಾನ

೮. ಮಂಟೇಸ್ವಾಮಿ ಕಾವ್ಯ ಮತ್ತು ಮಂಟೇಸ್ವಾಮಿ ಪರಂಪರೆ

೯. ಕುಮಾರವ್ಯಾಸ ಮತ್ತು ಕನ್ನಡ ಸಂಸ್ಕೃತಿ

೧೦. ಹದಿನೇಳು ಮತ್ತು ಹದಿನೆಂಟನೇ ಶತಮಾನದ ಅನುಭಾವ ಸಾಹಿತ್ಯ

೧೧. ಜಾನಪದ ಸಾಹಿತ್ಯ ಮತ್ತು ಆಧುನಿಕ ಸಾಹಿತ್ಯ

೧೨. ಕನ್ನಡ ಕವಿತೆ, ಓದುಗರು ಇತ್ಯಾದಿ

೧೩. ಕುವೆಂಪು ಸಾಹಿತ್ಯದ ಬಹುಮುಖಿ ಓದು

೧೪. ನವೋದಯ ಮತ್ತು ಕಾಲ್ಪನಿಕ ವಸ್ತುನಿಷ್ಠತೆ : ರತ್ನನ ಪ್ರಪಂಚ ದೃಷ್ಟಿ

೧೫. ಗೋಪಾಲಕೃಷ್ಣ ಅಡಿಗರ "ಮೂಲಕ ಮಹಾಶಯರು"

೧೬. ಲಂಕೇಶರ ಸೃಜನಶೀಲತೆ ಮತ್ತು ಅವರ ನಾಟಕಗಳು

೧೭. ಎಚ್.ಎಸ್.ಶಿವಪ್ರಕಾಶರ 'ಮಿಲರೇಪ'

೧೮. ದೇವನೂರ ಮಹಾದೇವರ 'ಕುಸುಮಬಾಲೆ'

೧೯. ಪುಸ್ತಕ ವಿಮರ್ಶೆ

೨೦. ಕನ್ನಡದ ಆತಂಕಗಳು

೨೧. ಚಳುವಳಿಯ ಪಾಠ ಕಲಿಸಿದ ಪ್ರೊಫೆಸರ್ ಎಂ.ಡಿ.ಎನ್

೨೨. ಜನಪ್ರಿಯ ಚಲನಚಿತ್ರಗಳು : ಒಂದು ಸಂದರ್ಶನ

೨೩. "ಹಕ್ಕಿ ಹಾರುತಿದೆ ನೋಡಿದಿರಾ ?" : ಕೊನೆಯ ಉಪನ್ಯಾಸ